# ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳು - ಒಂದು ಅಧ್ಯಯನ

**KTSMDS - 00451**

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

ಅನಿತಾ ಕಾಮತ್ ಕೆ

ಮಾರ್ಗದರ್ಶಕರು

ಡಾ. ಸುಲೋಚನಾ ನಾರಾಯಣ

೨೦೧೦

ರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು - ೫೭೫ ೦೦೧

# ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳು– ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

**ಅನಿತಾ ಕಾಮತ್ ಕೆ**

ಮಾರ್ಗದರ್ಶಕರು

**ಡಾ. ಸುಲೋಚನಾ ನಾರಾಯಣ**

೨೦೧೦

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ

ಬಲ್ಮಠ, ಮಂಗಳೂರು – ೫೭೫೦೦೧



# ಯೋಗ್ಯತಾ ಪತ್ರ

**ಅನಿತಾ ಕಾಮತ್ ಕೆ** ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **"ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳು – ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಸುಲೋಚನ ನಾರಾಯಣ

**ಡಾ. ಸುಲೋಚನಾ ನಾರಾಯಣ**

ಸಂಶೋಧನ ಮಾರ್ಗದರ್ಶಕರು

**ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ**

ಬಲ್ಮಠ, ಮಂಗಳೂರು





# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ. ಫಿಲ್ ಪದವಿಗಾಗಿ ಸಾದರಪಡಿಸಿದ **"ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳು – ಒಂದು ಅಧ್ಯಯನ"**. ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ಸುಲೋಚನಾ ನಾರಾಯಣ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ಅನಿತಾ. ಕಾಮತ್. ಕೆ

**ಅನಿತಾ ಕಾಮತ್ ಕೆ**

ಸಂಶೋಧಕರು

**ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ**

ಬಲ್ಮಠ, ಮಂಗಳೂರು



# ಕೃತಜ್ಞತೆಯ ನುಡಿಗಳು

**"ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳು"** ಎಂಬ ವಿಷಯದಲ್ಲಿ ಅಧ್ಯಯನವನ್ನು ಕೈಗೊಂಡು ವಾಸ್ತವಾಂಶಗಳನ್ನು ಹೊರತರುವ ಪ್ರಯತ್ನವೊಂದನ್ನು ಮಾಡತೊಡಗಿದೆ. ಈ ಅಧ್ಯಯನಕ್ಕೆ ಸಂಪೂರ್ಣ ಮಾರ್ಗದರ್ಶನ ಮಂಗಳೂರಿನ ಬೆಸೆಂಟ್ ಮಹಿಳಾ ಕಾಲೇಜಿನ ರಾಜ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕಿ ಡಾ. ಸುಲೋಚನ ನಾರಾಯಣ್ ರವರಿಂದ ಲಭಿಸಿದೆ. ವಸ್ತು ವಿಷಯಗಳ ರೂಪಾತ್ಮಕ ಅಧ್ಯಯನಕ್ಕೆ ಮಾರ್ಗದರ್ಶನ, ಸಹಕಾರ ಹಾಗೂ ಪ್ರೋತ್ಸಾಹಗಳನ್ನು ನೀಡಿ ಪ್ರಸ್ತುತ ಅಧ್ಯಯನವನ್ನು ಯಶಸ್ವಿಯಾಗಿ ಪೂರ್ಣಗೊಳಿಸಲು ನನ್ನೊಡನೆ ಕೈ ಜೋಡಿಸಿರುವುದಕ್ಕಾಗಿ ಅವರಿಗೆ ನಾನು ಚಿರಋಣಿಯಾಗಿರುತ್ತೇನೆ.

ಹಂಪಿ ವಿಶ್ವವಿದ್ಯಾನಿಲಯಕ್ಕೆ ಸೇರಿಕೊಂಡು ಸಂಶೋಧನಾ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸುತ್ತಿರುವ, ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ, ಬಲ್ಮಠ ಇದರ ನಿರ್ದೇಶಕರಾದ ಡಾ. ರತ್ನಾಕರ ಸದಾನಂದ ಹಾಗೂ ಸಂಯೋಜಕರಾದ ಶ್ರೀಯುತ ನಾವಡರವರ ಸಂದರ್ಭೋಚಿತ ಸಲಹೆಗಳನ್ನು ನೀಡಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟಿರುವುದಕ್ಕಾಗಿ ಅನಂತ ಧನ್ಯವಾದಗಳನ್ನು ಸಮರ್ಪಿಸುತ್ತಿದ್ದೇನೆ.

ಸಂಶೋಧನೆಗೆ ಅಗತ್ಯವಾದ ದಾಖಲೆಗಳನ್ನು ವಿವಿಧ ಗ್ರಂಥಾಲಯಗಳಿಂದ ಪಡೆದು ಕೊಂಡು ಅಧ್ಯಯನಕ್ಕೆ ಆಧಾರವನ್ನು ಒದಗಿಸಿಕೊಂಡಿದ್ದೇನೆ. ಸಹಕರಿಸಿದ ಪ್ರತಿಯೊಬ್ಬರಿಗೆ ಈ ಸಂದರ್ಭದಲ್ಲಿ ನನ್ನ ಕೃತಜ್ಞತೆಗಳು ಸಲ್ಲುತ್ತದೆ.

ವಿಶೇಷವಾಗಿ, ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳು ಕುರಿತಂತೆ ಅನೇಕ ಹಿರಿಯ ಚೇತನಗಳಿಂದ, ಹಾಗೂ ಕುಟುಂಬ ಸದಸ್ಯರಿಂದ ಅನುಭವದ ಮಾಹಿತಿಗಳನ್ನು ಪಡೆದಿರುತ್ತೇನೆ. ಕೊನೆಯಲ್ಲಿ ಸಂದರ್ಶಕರ ಪಟ್ಟಿಯಲ್ಲಿರುವ ಪ್ರತಿಯೋರ್ವ ಸಜ್ಜನ ವ್ಯಕ್ತಿಯೂ ನನ್ನೊಡನೆ ತಾಳ್ಮೆಯಿಂದ ನಡೆದುಕೊಂಡು ಬಹಳಷ್ಟು ಸಲಹೆ,

ಸೂಚನೆಗಳನ್ನು ನೀಡಿ ಅಧ್ಯಯನವನ್ನು ರೂಪಿಸಲು ಸಹಕರಿಸಿರುವರು. ನನ್ನ ಕೃತಜ್ಞತೆಗಳು ಸದಾ ಅವರಿಗೆ ಸಲ್ಲುತ್ತದೆ.

ಅಂತೆಯೇ ಸಂದರ್ಶನ ಸಂದರ್ಭದಲ್ಲಿ ನೀಡಿದ ಸ್ಪಂದನ ಅಧ್ಯಯನಕ್ಕೆ ಸ್ಫೂರ್ತಿಯನ್ನು ನೀಡಿದೆ. ತಿಳಿದ ಮಾಹಿತಿಗಳನ್ನು ನೀಡಿದವರೆಲ್ಲರಿಗೂ ಧನ್ಯವಾದಗಳು.

ಕಾಲೇಜಿನ ನಿವೃತ್ತ ಪ್ರಾಂಶುಪಾಲರಾದ ಪ್ರೊ. ಆರ್. ವೇದವ್ಯಾಸ ಹಾಗೂ ಪ್ರಸ್ತುತ ಪ್ರಾಂಶುಪಾಲರಾಗಿರುವ ಡಾ. ಮಾಧವ ಭಟ್ ಹಾಗೂ ಎಲ್ಲ ಸಹೋದ್ಯೋಗಿಗಳಿಗೂ ನನ್ನ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಹಿಂದಿನಿಂದ ಬೆಂಬಲ, ಆತ್ಮ ವಿಶ್ವಾಸ ನೀಡಿ ದೈನಂದಿನ ಜೀವನದಲ್ಲಿ ಬಹಳ ಹೊಂದಾಣಿಕೆ ಮಾಡಿದ ಪತಿ ಶ್ರೀಯುತ ಗಣೇಶ್ ಪೈ ರವರಿಗೂ, ಮಕ್ಕಳಿಗೂ ನಾನು ಚಿರಋಣಿ.

ಪ್ರತಿ ಅಧ್ಯಾಯವನ್ನು ಅಚ್ಚುಕಟ್ಟಾಗಿ ಕಂಪ್ಯೂಟರೀಕರಣಗೊಳಿಸಿ, ಸುಂದರವಾಗಿ ಪ್ರಿಂಟ್ ತೆಗೆದ ಬಲ್ಮಠ ಇನ್‌ಸ್ಟಿಟ್ಯೂಟ್ ಆಫ್ ಕಂಪ್ಯೂಟರ್ ಸೆಂಟರ್ ಮತ್ತು ಬಲ್ಮಠ ಪ್ರಿಂಟಿಂಗ್ ಪ್ರೆಸ್ ನವರಿಗೆ ವಂದನೆಗಳು.

ಪರೋಕ್ಷವಾಗಿ ಸಂಶೋಧನೆಯ ಯಶಸ್ವಿಗೆ ಸಹಾಯ ಹಸ್ತ ನೀಡಿದ ಎಲ್ಲರಿಗೂ ನನ್ನ ನಮನಗಳು.

ಅನಿತಾ ಕಾಮತ್ ಕೆ

ಸಂಶೋಧಕರು

# ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳು – ಒಂದು ಅಧ್ಯಯನ

## ಅಧ್ಯಯನದ ವಿವರಗಳು

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಊಹೆ, ವಿಧಾನಗಳು, ವ್ಯಾಪ್ತಿ ಹಾಗೂ ರೂಪಿಸಿಕೊಂಡ ಚೌಕಟ್ಟುಗಳು

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಊಹೆ, ವಿಧಾನಗಳು, ವ್ಯಾಪ್ತಿ ಹಾಗೂ ರೂಪಿಸಿಕೊಂಡ ಚೌಕಟ್ಟುಗಳು

## ೧.೧. ಅಭಿವೃದ್ಧಿ ಪರಿಕಲ್ಪನೆ

ಅಭಿವೃದ್ಧಿ ಎನ್ನುವುದು ನಿರಂತರವಾದ ಚಲನಶೀಲ ಪ್ರಕ್ರಿಯೆಯಾಗಿದೆ. ಪ್ರತಿಯೊಂದು ದೇಶವೂ ಅಭಿವೃದ್ಧಿಗೆ ತೆರೆದುಕೊಳ್ಳಲೇಬೇಕಾಗಿದೆ; ಅದಕ್ಕೆ ತಕ್ಕ ರೀತಿಯಲ್ಲಿ ಜನಜೀವನ, ಪರಿಸರ ಸಂಸ್ಕೃತಿ ಮುಂತಾದುವುಗಳು ಬದಲಾವಣೆಯನ್ನು ಕಂಡುಕೊಳ್ಳಬೇಕಾಗಿದೆ. ಅಭಿವೃದ್ಧಿಯ ೨ ಆಯಾಮಗಳೇ ಚಲನಶೀಲತೆ ಹಾಗೂ ಬದಲಾವಣೆ. ಅಭಿವೃದ್ಧಿಯು ಬೆಳವಣಿಗೆ ಎಂದು ಪರಿಭಾವಿಸಿದಾಗ ಅದು ಅವಿಷ್ಕಾರಗಳ ಜೊತೆಗೂಡಿಯೇ ಸಾಗಬೇಕು. ಒಂದು ಪ್ರದೇಶ ಅಭಿವೃದ್ಧಿಯಾಗುವುದೆಂದರೆ ಅಲ್ಲಿ ರಚನಾತ್ಮಕ ಪರಿವರ್ತನೆ, ವೈಜ್ಞಾನಿಕ ಮುನ್ನಡೆ, ತಂತ್ರಜ್ಞಾನದ ಬಳಕೆ, ನಾಯಕತ್ವದ ದೂರದರ್ಶಿತ್ವ, ಆರ್ಥಿಕತೆಯಲ್ಲಿ ಸುಧಾರಣೆಗಳಾಗಬೇಕು. ಒಟ್ಟಿನಲ್ಲಿ ಅಲ್ಲಿರುವ ಜನರ ಜೀವನ ಸ್ಥಿತಿಗತಿಗಳು ಸುಧಾರಿಸಬೇಕು.

ಅಭಿವೃದ್ಧಿ ಎನ್ನುವುದು ಬಹುಮುಖ ಸ್ವರೂಪವುಳ್ಳದ್ದು. ಅದರ ಗುರಿಯು ಮನುಷ್ಯ ಜೀವನವನ್ನು ಉತ್ತಮಗೊಳಿಸುವುದಾಗಿದೆಯಲ್ಲದೆ, ಅದು ದೀರ್ಘಾವಧಿ ಪ್ರಕ್ರಿಯೆಗಳನ್ನು ಒಳಗೊಂಡಿರುತ್ತದೆ. ಯಾವುದೇ ಪ್ರದೇಶವಿರಲಿ ಅಲ್ಪಕಾಲದಲ್ಲಿ ಪವಾಡಸದೃಶವಾಗಿ ಪ್ರಗತಿಹೊಂದಲು ಸಾಧ್ಯವಿಲ್ಲ. ಅದರ ಹಿಂದೆ ಚಾಲನಾಶಕ್ತಿಯಾಗಿ ಜನನಾಯಕರಿರಬೇಕಾಗುವುದು ಅನಿವಾರ್ಯ. ಅವರಿಗೆ ಅಭಿವೃದ್ಧಿ ಎನ್ನುವುದು ಸವಾಲಾತ್ಮಕವಾದರೂ ಮುಂದಿನ ಪೀಳಿಗೆಗೆ ನಿರಂತರವಾಗಿ ವಿಕಾಸ ಮತ್ತು ಪರಿಶ್ರಮಗಳ ಫಲವು ದೊರೆಯುತ್ತದೆ. ಅಭಿವೃದ್ಧಿಯಲ್ಲಿ ವ್ಯಕ್ತಿ ಮತ್ತು ಸಮಾಜಗಳೆರಡೂ ಉನ್ನತಿಯನ್ನು ಸಾಧಿಸಬೇಕೆನ್ನುವುದು ಎಲ್ಲರೂ ಒಪ್ಪಬಹುದಾದ ವಿಷಯವೇ ಆಗಿದೆ. ಅಂತಹ ಪ್ರಯತ್ನಗಳಿಂದಾಗಿ ಜನರು ಸ್ವಗೌರವ, ಅಭಿವ್ಯಕ್ತಿ ಸ್ವಾತಂತ್ರ್ಯ, ಉನ್ನತ ಜೀವನ ಮೌಲ್ಯಗಳ ಅಳವಡಿಕೆ, ಸಾಮಾಜಿಕ ಸೌಹಾರ್ದತೆ, ಸಂಸ್ಕೃತಿ–ಜೀವನ ಮೌಲ್ಯಗಳ ನಡುವೆ ಪ್ರೀತಿ ಮುಂತಾದುವುಗಳನ್ನು ಪಡೆಯುವುದು ನಿರ್ದಿಷ್ಟ ಗುರಿಯಾಗಿರುತ್ತದೆ.

ಅಭಿವೃದ್ಧಿಯನ್ನು ವಿಶ್ಲೇಷಿಸುವುದು ಸುಲಭವಲ್ಲ. ಅದು ವ್ಯಕ್ತಿ ನಿಷ್ಠ ದೃಷ್ಟಿ ಕೋನಗಳನ್ನು ಒಳಗೊಂಡಿರುತ್ತದೆ. ಅದನ್ನು ಖಚಿತವಾಗಿ ಅಳೆಯಲು ಕಷ್ಟ. ಈ ಹಿನ್ನಲೆಯಿಂದ ಅರ್ಥಶಾಸ್ತ್ರಜ್ಞರು ಅಭಿವೃದ್ಧಿಯ ಸರಿಯಾದ ಮಾಪನ ಅಸಾಧ್ಯವೆಂದು ಪರಿಭಾವಿಸುತ್ತಾರೆ.

ಆದರೆ ಸಂಶೋಧನಾ ಅಧ್ಯಯನ ದೃಷ್ಟಿಯಿಂದ ಅಭಿವೃದ್ಧಿಯನ್ನು ವ್ಯಾಖ್ಯಾನಿಸುವುದು ಅಗತ್ಯ. ಅಭಿವೃದ್ಧಿಯ ಹುಡುಕಾಟ ಕಾಲ್ಪನಿಕವಾಗಿರಬಾರದು. ಆದ್ದರಿಂದ ಕೆಲವು ಉಲ್ಲೇಖಗಳು ಇಲ್ಲಿ ಅಗತ್ಯ. ''ಒಕನ್ ಮತ್ತು ರಿಚರ್ಡ್‌ಸನ್'' ಎಂಬ ತಜ್ಞರು ಆರ್ಥಿಕ ಅಭಿವೃದ್ಧಿಯ ಅಧ್ಯಯನಗಳು ಎಂಬ ಕೃತಿಯಲ್ಲಿ ''ಆರ್ಥಿಕ ಅಭಿವೃದ್ಧಿಯು ಸರಕು ಮತ್ತು ಸೇವೆಗಳ ಹೆಚ್ಚಳವನ್ನು ಪ್ರತಿಬಿಂಬಿಸುವ ಕಲ್ಯಾಣದ ದೀರ್ಘಕಾಲಿಕ ಸುಧಾರಣೆಯಾಗಿದೆ'' ಎಂದಿರುತ್ತಾರೆ. ಇದನ್ನು ಗಮನಿಸಿದರೆ ಅಭಿವೃದ್ಧಿ ಎನ್ನುವುದು ರಾಷ್ಟ್ರೀಯ ಆದಾಯದ ನೆಲೆಯಿಂದ ರೂಪುಗೊಳ್ಳುತ್ತದೆ.

ಅಭಿವೃದ್ಧಿಯನ್ನು ಪ್ರೇರೇಪಿಸುವ ಹಾಗೂ ಪ್ರಭಾವಿಸುವ ಸಾಂಸ್ಕೃತಿಕ, ಸಾಮಾಜಿಕ ಮತ್ತು ಅಂತರಾಷ್ಟ್ರೀಯ ಅಂಶಗಳೆಲ್ಲವನ್ನೂ ಪರಿಗಣಿಸಿಕೊಂಡು ವಿಶ್ವ ಸಂಸ್ಥೆಯ ತಜ್ಞರ ಸಮಿತಿಯೊಂದು ಅಭಿವೃದ್ಧಿಯನ್ನು ವ್ಯಾಖ್ಯಾನಿಸುತ್ತದೆ. ''ಅಭಿವೃದ್ಧಿಯು ಭೌತಿಕ ಅಗತ್ಯಗಳನ್ನು ಮಾತ್ರವಲ್ಲದೆ ಮನುಷ್ಯನ ಸಾಮಾಜಿಕ ಜೀವನವನ್ನು ಒಳಗೊಂಡಿರುತ್ತದೆ. ಅಭಿವೃದ್ಧಿಯೆಂದರೆ ಆರ್ಥಿಕ ಬೆಳವಣಿಗೆ ಮಾತ್ರವಲ್ಲ... ಜೊತೆಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳನ್ನು ಒಳಗೊಂಡಿರುತ್ತದೆ''.

ಅಭಿವೃದ್ಧಿ ಅಧ್ಯಯನದ ಪರಿಣಿತ 'ಮೈಖೇಲ್ ಟೋಡೇ'ರೋರವರ ಅಭಿಪ್ರಾಯಗಳು ಅಧ್ಯಯನಕ್ಕೆ ಪೂರಕವಾಗುವ ಚಿಂತನೆಗಳಾಗಿದೆ. ''ಅವರು ತೃತೀಯ ವಿಶ್ವದಲ್ಲಿ ಆರ್ಥಿಕ ಅಭಿವೃದ್ಧಿ ಎಂಬ ಕೃತಿಯಲ್ಲಿ ಅಭಿವೃದ್ಧಿಯನ್ನು ಸಾಮಾಜಿಕ ರಚನೆಗಳಲ್ಲಿ ಜನರ ವರ್ತನೆಗಳಲ್ಲಿ ಮತ್ತು ಸಂಘ ಸಂಸ್ಥೆಗಳಲ್ಲಿ ಬೃಹತ್ ಬದಲಾವಣೆಯನ್ನು ಹಾಗೂ ಆರ್ಥಿಕ ಬೆಳವಣಿಗೆಗಳ ವೇಗೋತ್ಕರ್ಷ, ಅಸಮಾನತೆಯ ಇಳಿಕೆ ಮತ್ತು ನಿರಪೇಕ್ಷೆ ಬಡತನದ ನಿವಾರಣೆಗಳನ್ನು ಒಳಗೊಂಡಿರುವ ಪ್ರಕ್ರಿಯೆ ಎಂದು ಉಲ್ಲೇಖಿಸಿದ್ದಾರೆ''. ಈ ವ್ಯಾಖ್ಯೆಯನ್ನು ವಿಶ್ಲೇಷಿಸುವಾಗ ಅಭಿವೃದ್ಧಿ ಎನ್ನುವುದು ಒಂದು ಸಮಗ್ರ ಸುಧಾರಣೆ... ಹಾಗೂ ಸಕಾರಾತ್ಮಕ ಬದಲಾವಣೆ ಎನ್ನುವ ಅಭಿಪ್ರಾಯಗಳು ಅಭಿವ್ಯಕ್ತಗೊಳ್ಳುತ್ತದೆ.

ಯಾವುದೇ ಪ್ರದೇಶವಿರಲಿ, ಅದರ ಅಭಿವೃದ್ಧಿಯನ್ನು ಕುರಿತಂತೆ ಪರಿಶೀಲಿಸುವಾಗ ಹಲವು ಅಂಶಗಳಿಂದ ಆವರಿಸಿಕೊಂಡ ವಿಷಯವಾಗಿದೆ ಎನ್ನುವುದು ತಿಳಿಯುತ್ತದೆ. ಅಭಿವೃದ್ಧಿ ಅಧ್ಯಯನ, ಅಭಿವೃದ್ಧಿ ಸಮಸ್ಯೆ, ಅಭಿವೃದ್ಧಿ ಹೊಂದುತ್ತಿರುವ ದೇಶ, ಹಿಂದುಳಿದ ಪ್ರದೇಶಗಳು, ಅಭಿವೃದ್ಧಿ ಸಹಕಾರ, ಅಭಿವೃದ್ಧಿ ನೆರವು, ಯೋಜನೆಗಳು, ಸರ್ಕಾರಿ ನೀತಿಗಳು, ನಾಯಕತ್ವದ ಪಾತ್ರ... ಹೀಗೆ ಹಲವಾರು ಆಯಾಮಗಳನ್ನು ''ಅಭಿವೃದ್ಧಿ'' ಪಡೆದಿರುತ್ತದೆ. ಈ ಕುರಿತಾದ ಒಟ್ಟು ವಿಶ್ಲೇಷಣೆಯಲ್ಲಿ ಒಂದು ಸತ್ಯ ಗೋಚರಿಸುತ್ತದೆ. ಬಡತನ, ಬಡತನ–ಶ್ರೀಮಂತಿಕೆಯ ನಡುವಣ ವ್ಯತ್ಯಾಸಗಳು, ಜೊತೆಗೆ ಪ್ರಶ್ನೆಯೊಂದು ಎದುರಾಗುತ್ತದೆ... ಹಿಂದುಳಿದ ಪ್ರದೇಶ ಹಿಂದುಳಿಯಲು, ಶ್ರೀಮಂತ ಪ್ರದೇಶ ಹೆಚ್ಚು ಶ್ರೀಮಂತವಾಗಲು ಕಾರಣವೇನು? ಹಿಂದುಳಿದ ಪ್ರದೇಶದಲ್ಲಿ ಜನಜೀವನದ ಗುಣಮಟ್ಟವನ್ನು ಹೆಚ್ಚಿಸಲು ಮಾಡಬಹುದಾದ ಪ್ರಯತ್ನಗಳೇನು? ಇತ್ಯಾದಿಗಳ ಹಿನ್ನಲೆಯಿಂದ ಅಭಿವೃದ್ಧಿಯನ್ನು ಪರಿಶೀಲಿಸುವಾಗ ಮುಖ್ಯವಾಗಿ ಇದು ''ಆರ್ಥಿಕ ಪ್ರಗತಿ, ಆದಾಯದ ಹೆಚ್ಚಳವೆನ್ನುವ ಒಳನೋಟವೊಂದು ಸಿಕ್ಕುತ್ತದೆ.

ಆದರೆ ಅಭಿವೃದ್ಧಿ ಎನ್ನುವುದು ಕೇವಲ ಆರ್ಥಿಕ ಬೆಳವಣಿಗೆಗೆ ಮಾತ್ರ ಸಂಬಂಧಿಸಿದ್ದು ಅಲ್ಲ. ಅಭಿವೃದ್ಧಿಯು ಆರ್ಥಿಕ ಬೆಳವಣಿಗೆಗಳಿಗಿಂತ ಹೆಚ್ಚಿನ ಅರ್ಥವನ್ನು ಪಡೆದಿರುವುದು ಕಾಣುತ್ತದೆ. ಆರ್ಥಿಕ ಬೆಳವಣಿಗೆಯಲ್ಲಿ ಗುಣಾತ್ಮಕ ಬದಲಾವಣೆಗಳನ್ನು ಕಾಣಬೇಕಾಗಿದೆ. ಆರ್ಥಿಕ ರಚನೆ ಮತ್ತು ಉತ್ಪಾದನೆಗಳ ಗುಣಮಟ್ಟವೂ ಹೆಚ್ಚಳವಾಗಬೇಕು. ಜೊತೆಗೆ ಒಂದು ಪ್ರದೇಶದಲ್ಲಿ ಅಕ್ಷರತೆ, ಆರೋಗ್ಯದ ಗುಣಮಟ್ಟ, ಪೌಷ್ಟಿಕ, ಆಹಾರ, ಶಿಕ್ಷಣ, ಇತ್ಯಾದಿಗಳು ಸಾಗಬೇಕಾಗಿದೆ. ಆದುದರಿಂದ ಸಂಪನ್ಮೂಲಗಳನ್ನು ಕ್ರೋಢೀಕರಿಸಿಕೊಂಡು ಆ ಪ್ರದೇಶದ ಒಟ್ಟು ಪ್ರಗತಿಗೆ ಹೋರಾಡುವ ನಾಯಕರು ಅಗತ್ಯವೆನ್ನುವುದನ್ನು ಗಮನಿಸಬೇಕು.

**ಸಾಮಾಜಿಕ – ಆರ್ಥಿಕ ಅಭಿವೃದ್ಧಿಯ ಹಿಂದಿರಬೇಕಾದ ನೈತಿಕಶಕ್ತಿ/ಅಭಿವೃದ್ಧಿಯ ಆದರ್ಶಗಳು**

- ಒಂದು ಪ್ರದೇಶದ ಅಭಿವೃದ್ಧಿಗಾಗಿ ಅಳವಡಿಸಿಕೊಳ್ಳಬಹುದಾದ ತಾಂತ್ರಿಕ ತಿಳುವಳಿಕೆ, ಸಾಮಾಜಿಕ ಸಂಬಂಧಗಳ ಸಂರಚನೆ, ಉದ್ದೇಶಗಳು ಹಾಗೂ ಅವುಗಳನ್ನು ಸಾಧಿಸಲು ಅಗತ್ಯವಿರುವ ವಿಧಾನಗಳು.
- ಅಭಿವೃದ್ಧಿ ಯೋಜನೆಗಳು ಮತ್ತು ಆ ಪ್ರದೇಶದ ಸ್ಥಿತಿಗತಿಗಳನ್ನು ಬದಲಾಯಿಸಲು ಒಂದು ಪರಿಪೂರ್ಣವಾದ ನೀತಿ ಯೋಜನೆಗಳನ್ನು ಹುಡುಕುವಿಕೆ.
- ಕೈಗಾರಿಕೀಕರಣ ಮತ್ತು ಬಂಡವಾಳ ಹೂಡಿಕೆಯಿಂದ ಉತ್ಪದನೆ ಮತ್ತು ಆದಾಯದ ಹೆಚ್ಚಳ.
- ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಯನ್ನು ನಿವಾರಿಸಿ ಅಭಿವೃದ್ಧಿಯು ಜನಸಾಮಾನ್ಯರನ್ನು ತಲುಪುವಂತೆ ಮಾಡುವ ಪ್ರಯತ್ನ.
- ಒಟ್ಟು ಅಭಿವೃದ್ಧಿಗಾಗಿ ದಕ್ಷತೆಯಿರುವ ಸಂಸ್ಥೆಯನ್ನು ಬೆಳೆಸುವಿಕೆ ಹಾಗೂ ಜನರ ಮನೋವೃತ್ತಿಯಲ್ಲಿ ಸಕಾರಾತ್ಮಕತೆಯನ್ನು ತರುವುದು. ಉದಾಹರಿಸಬಹುದಾದರೆ ಸಂಸ್ಥೆಯಲ್ಲಿ ಚಲನಶೀಲತೆ, ಸ್ವಪ್ರೇರಣೆಯಿಂದ ತೊಡಗಿಸಿಕೊಳ್ಳುವಿಕೆ, ಆರೋಗ್ಯಪೂರ್ಣವಾದ ಸ್ಪರ್ದೆ, ಸಮಾನ ಅವಕಾಶಗಳು, ಮನೋವೃತ್ತಿಯಲ್ಲಿ ದಕ್ಷತೆ, ಕಾಲಪ್ರಜ್ಞೆ, ಪ್ರಾಮಾಣಿಕತೆ, ಬದಲಾವಣೆಗೆ ತೆರೆದುಕೊಳ್ಳುವಿಕೆ, ವೈಚಾರಿಕ ನಿಲುವುಗಳು ಮುಂತಾದವುಗಳು.
- ಅಭಿವೃದ್ಧಿ ಪ್ರಕ್ರಿಯೆಯಲ್ಲಿ ರಾಜಕೀಯ ಪ್ರಜಾಪ್ರಭುತ್ವವು ಅಗತ್ಯ. ಜನಸಾಮಾನ್ಯರ ಅಭಿಪ್ರಾಯಗಳು ರಾಜಕೀಯ ನಿರ್ಣಯ ತೆಗೆದುಕೊಳ್ಳಲು ಅನುಕೂಲಕಾರಿಯಾಗಿರಬೇಕು. ನಾಯಕತ್ವಕ್ಕೂ, ಸಾಮಾನ್ಯ ಜನತೆಗೂ ನಿರಂತರ ಸಂಪರ್ಕವಿರಬೇಕಾಗುತ್ತದೆ.
- ಸಮಾಜದಲ್ಲಿ ಜನರ ವರ್ತನೆಗಳು ಶಿಸ್ತುಬದ್ಧವಾಗಿರಬೇಕಾಗುತ್ತದೆ. ಅಭಿವೃದ್ಧಿಯ ಗುರಿಗಳನ್ನು ಸರ್ಕಾರವು ಬಲವಂತವಾಗಿ ಜನರ ಮೇಲೆ ಹೇರುವಂತಾಗಬಾರದು.

ಈ ಮೇಲಿನ ಅದರ್ಶಗಳನ್ನು ಗಮನಿಸುವಾಗ ಒಂದು ಪ್ರದೇಶದ ಅಭಿವೃದ್ಧಿಗೆ ಅವುಗಳೆಲ್ಲವನ್ನೂ ಮನನ ಮಾಡಿಕೊಂಡು ಕಾರ್ಯಗತಗೊಳಿಸುವ ಪ್ರಯತ್ನಗಳನ್ನು ಮಾಡುವ ನಾಯಕತ್ವ ಅಗತ್ಯವೆನ್ನುವುದನ್ನು ಮನಗಾಣಬೇಕಾಗಿದೆ.

ಭಾರತದ ಆರ್ಥಿಕಾಭಿವೃದ್ಧಿ ಎನ್ನುವ ಕೃತಿಯಲ್ಲಿ 'ಒಡೆಯರ್ ಡಿ. ಹೆಗ್ಗಡೆ' ಅಭಿವೃದ್ಧಿಯನ್ನು ಕುರಿತಂತೆ ಪ್ರಥಮ ಪಂಚವಾರ್ಷಿಕ ಯೋಜನೆಯು ನೀಡಿದ ವ್ಯಾಖ್ಯಾನವನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತ. "ಅಪೂರ್ಣಾಭಿವೃದ್ಧಿ ಆರ್ಥಿಕತೆಯೊಂದರ ಲಕ್ಷಣವೆಂದರೆ ಒಂದೆಡೆ ಅದು ಬಹುಮಟ್ಟಿಗೆ ಬಳಸಲಾದ ಅಥವಾ ಅಲ್ಪಸ್ವಲ್ಪವಷ್ಟೇ ಬಳಸದಿರುವ ನೈಸರ್ಗಿಕ ಸಂಪನ್ಮೂಲಗಳನ್ನು ಪಡೆದಿರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಚಲನಶೀಲವಾಗಿ ಕಾರ್ಯಾಚರಣೆ ಮಾಡುವಲ್ಲಿ ಅಡ್ಡಿಯಾಗುವ ಅಂಶಗಳು ಸಾಮಾಜಿಕ–ಆರ್ಥಿಕ ಶಕ್ತಿಗಳನ್ನು ಕುಂಠಿತಗೊಳಿಸುತ್ತದೆ".

ಆದುದರಿಂದ ಸಂಪನ್ಮೂಲವನ್ನು, ತಾಂತ್ರಿಕತೆನ್ನು ಬಳಸಿಕೊಳ್ಳುವ, ಸಾಮಾಜಿಕ ಆರ್ಥಿಕ ಅಡೆತಡೆಗಳನ್ನು ನಿವಾರಿಸುವ ಪ್ರತಿಭಾವಂತ ಜನರ ನಾಯಕತ್ವವು ಅಗತ್ಯ. ಮಾನವನ ಒಟ್ಟು ಅಭಿವೃದ್ಧಿಗೆ ಹಾಗೂ ಮೇಲ್ಮಟ್ಟದ ಜನಜೀವನಕ್ಕಾಗಿ ಸಕಾರಾತ್ಮಕ ಪರಿವರ್ತನೆಗಳನ್ನು ತರುವುದು ನಾಯಕತ್ವದ ಮುಂದಿರುವ ಬಹುದೊಡ್ಡ ಸವಾಲು ಎನ್ನುವುದನ್ನು ಪರಿಗಣಿಸಬೇಕು.

### ೧.೨. ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯಪೂರ್ವದಲ್ಲಿನ ಪರಿಸ್ಥಿತಿಗಳ ವಿಶ್ಲೇಷಣೆ

ಪ್ರಾಕೃತಿಕ ಹಾಗೂ ಸ್ವಾಭಾವಿಕ ಅಂಶಗಳನ್ನು ಗುರುತಿಸುವಾಗ ಈ ಪ್ರದೇಶದಲ್ಲಿ ಕರಾವಳಿಯಲ್ಲಿ ಕೃಷಿಮೂಲವಾದ ಪ್ರದೇಶಗಳು ಕಂಡು ಬರುತ್ತದೆ. ಅಂದಿನ ಸಂದರ್ಭದಲ್ಲಿದ್ದ ಜನಸಂಖ್ಯೆಯನ್ನು ಇಂದಿನ ಜನಸಂಖ್ಯೆಗೆ ಹೋಲಿಸಿದರೆ ಬಹಳ ಕಡಿಮೆ ಇರುವುದು ಕಾಣುತ್ತದೆ. ಆಧುನಿಕತೆಯ ಸೋಗುಗಳಾಗಲಿ, ತಾಂತ್ರಿಕತೆಯ ಅವಿಷ್ಕಾರಗಳಾಗಲೀ, ಸ್ವಾತಂತ್ರ್ಯ ಪೂರ್ವದ ದಕ್ಷಿಣ ಕನ್ನಡ ಜಿಲ್ಲೆಗೆ ಭಾದಿಸಿದಂತಿಲ್ಲ. ಒಂಭತ್ತು ಲಕ್ಷಕ್ಕೂ ಹೆಚ್ಚಿನ ಮನೆಗಳು ಹುಲ್ಲುಹೊದಿಕೆಗಳ ಗುಡಿಸಲುಗಳಾಗಿದ್ದವು ಎನ್ನುವುದು ಐತಿಹಾಸಿಕ ದಾಖಲೆಗಳು ತಿಳಿಸುತ್ತದೆ. ಅಭಿವೃದ್ಧಿಯ ಆಧಾರವಾಗಿ ಬೃಹತ್ ಕಾರ್ಖಾನೆಗಳು ಇಂದಿನಂತೆ ತಲೆ ಎತ್ತಿರಲಿಲ್ಲ. ನೈಸರ್ಗಿಕ ಸಂಪನ್ಮೂಲಗಳು ಮತ್ತು ಅರಣ್ಯಗಳು ಬಹುಮಟ್ಟಿಗೆ ಅಭಾದಿತವಾಗಿತ್ತು.

ಈ ಹಿಂದೆ ದಕ್ಷಿಣ ಕನ್ನಡದಲ್ಲಿ ರೈಲು ಬಸ್ಸುಗಳ ಓಡಾಟವೂ ಹೆಚ್ಚಿರಲಿಲ್ಲ. ಮಂಗಳೂರಿನಂತಹ ನಗರವೂ ಹಸುರಿನ ಮಡಿಲಿನಲ್ಲಿ ಅಡಗಿದ್ದ ಪ್ರಶಾಂತ ತಾಣವಾಗಿತ್ತು ಎಂದು ದಕ್ಷಿಣ ಕನ್ನಡ ಜಿಲ್ಲೆಯ ಕೇಶವ ಉಚ್ಚಿಲರು ಅಭಿಪ್ರಾಯ ಪಡುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯು ಹಲವು ವರ್ಷಗಳ ಹಿಂದಿನಿಂದಲೂ ಸಮುದ್ರಯಾನಗಳಿಗೆ ತೆರೆದುಕೊಂಡ ಜಿಲ್ಲೆಯಾಗಿದೆ. ದೂರ ದೂರದ ದೇಶಗಳೊಂದಿಗೆ ಸಂಪರ್ಕಗಳನ್ನು ಹೊಂದಿತ್ತು ಎನ್ನಲಾಗಿದೆ. ಈ ಜಿಲ್ಲೆಯ ಪೂರ್ವ

ದಿಕ್ಕಿನಲ್ಲಿರುವ ಪಶ್ಚಿಮ ಘಟ್ಟದ ಶ್ರೇಣಿಗಳಿಂದ ಹಲವಾರು ಚಿಕ್ಕ ನದಿಗಳು ಹರಿಯುವುದರಿಂದ ನಾಡಿನೊಳಗಣ ಪ್ರಯಾಣ ಹಾಗೂ ಸಾಗಾಟಗಳು ದುಸ್ತರವಾಗಿದ್ದವು ಮತ್ತು ಈಗಿನಂತೆ ಡಾಮರು ಹಾಕಿರುವ ಗಟ್ಟಿಯಾದ ರಸ್ತೆಗಳು ಆಗ ಅಸ್ತಿತ್ವವನ್ನು ಕಂಡಿರಲಿಲ್ಲ. ಮಣ್ಣಿನ ರಸ್ತೆಗಳು ಅಲ್ಲಲ್ಲಿ ಇತ್ತು. ಜಿಲ್ಲೆಯ ವಸ್ತು ಸಾಗಾಣಿಕೆಗಳ ಪ್ರಮುಖ ಸಾಧನವೆಂದರೆ ಎತ್ತಿನ ಬಂಡಿಗಳು. ಸಾಗಾಣಿಕೆ ಕುರಿತಂತೆ ಅನೇಕ ಎಡರು ತೊಡರುಗಳು ಇದ್ದಿದ್ದರಿಂದ ಜನರು ತಲೆಹೊರೆಯಲ್ಲಿ ವಸ್ತುಗಳನ್ನು ಸಾಗಿಸುವುದು ಆ ಕಾಲದ ಸಾಮಾನ್ಯ ನೋಟವಾಗಿತ್ತು. ಜನಸಾಮನ್ಯರಿಗೆ ಕಾಲುನಡಿಗೆಯು ದೈನಂದಿನ ಪ್ರಯಾಣದ ಸಾಧನವಾಗಿತ್ತು. ಇವುಗಳೆಲ್ಲವೂ ಹಳ್ಳಿ ಪ್ರದೇಶಗಳ ಚಿತ್ರಣವೊಂದನ್ನು ನಮ್ಮ ಮುಂದಿಡುತ್ತದೆ. ಇನ್ನು ನಗರ ಪ್ರದೇಶಗಳ ವಾಸ್ತವ ಚಿತ್ರಣವನ್ನು ಪರಿಶೀಲಿಸುವಾಗ ಶ್ರೀಮಂತನೆನಿಸಿಕೊಂಡವರು ಜಟಕಾಬಂಡಿಗಳನ್ನು ಉಪಯೋಗಿಸುತ್ತಿದ್ದು ಪ್ರಯಾಣ ಹಾಗೂ ಸರಕುಗಳ ಪ್ರಮುಖ ಸಾಧನವಾಗಿದ್ದದ್ದು ಕಾಣುತ್ತದೆ. ಇನ್ನು ಒಂದು ವಿಷಯವನ್ನು ಗಮನಿಸುವುದಾದರೆ ಬಂಟವಾಳದಿಂದ ಮಂಗಳೂರಿನವರೆಗೂ ನೇತ್ರಾವತಿ ನದಿ ಪ್ರಯಾಣವು. ನದಿಯ ಮೂಲಕ ಜನರು ಪ್ರಯಾಣಿಸುವುದು ಸಾಮಾನ್ಯವಾಗಿತ್ತು ಎಂದು ಇತಿಹಾಸವು ತಿಳಿಸುತ್ತದೆ.

ಸ್ವಾತಂತ್ರ್ಯ ಪೂರ್ವದ ದಕ್ಷಿಣ ಕನ್ನಡವು ತಾಂತ್ರಿಕ ಅವಿಷ್ಕಾರಗಳಿಗೆ ಶರಣಾಗಿರಲಿಲ್ಲ. ಈ ಜಿಲ್ಲೆಯ ಜನರ ಪಾರಂಪರಿಕ ವೃತ್ತಿಯು ಬೇಸಾಯವಾಗಿತ್ತು. ದಕ್ಷಿಣಕನ್ನಡ ಜಿಲ್ಲೆಯು ಬೆಟ್ಟ ಗುಡ್ಡಗಳ ಪ್ರದೇಶವಾಗಿರುವುದರಿಂದ ಒಳನಾಡಿನ ಜನತೆ ಜೀವನೋಪಾಯಕ್ಕಾಗಿ ಗದ್ದೆ ತೋಟಗಳನ್ನು ದೈಹಿಕ ಶ್ರಮದಿಂದಲೇ ರೂಪಿಸಿಕೊಂಡಿದ್ದರು. ಕೃಷಿ ಪ್ರಧಾನವಾಗಿದ್ದ ಆರ್ಥಿಕ ಸಂರಚನೆಗಳಲ್ಲಿ ಈ ಜಿಲ್ಲೆಯ ಜನತೆ ಮಳೆಯನ್ನೇ ಅವಲಂಬಿಸಬೇಕಾಗಿತ್ತು. ಮಳೆಗಾಲದಲ್ಲಿ ಉಕ್ಕಿ ಹರಿಯುವ ನದಿಗಳು, ಬೇಸಿಗೆಯಲ್ಲಿ ಬತ್ತಿಹೋಗುವ ನದಿಗಳು ಕೃಷಿಕವರ್ಗಕ್ಕೆ ಬಹುದೊಡ್ಡ ಸವಾಲಾಗಿತ್ತು. ಆದರೂ ಸಾಮಾನ್ಯ ಜನರು ಭತ್ತ, ತೆಂಗು, ಅಡಿಕೆ ಮೊದಲಾದ ಬೆಳೆಗಳನ್ನು ಬೆಳೆದು ಜೀವನಸಾಗಿಸುತ್ತಿದ್ದರು ಎಂದು ಖ್ಯಾತ ಬರಹಗಾರ ಕೇಶವ ಉಚ್ಚಿಲರು ವಿವರಿಸುತ್ತಾರೆ[೬].

ದಕ್ಷಿಣ ಕನ್ನಡ ಜಿಲ್ಲೆಯು ಹಿಂದಿನಿಂದಲೂ ಮೀನುಗಾರಿಕೆಗೆ ಪ್ರಸಿದ್ಧಿಯಾಗಿರುವ ಜಿಲ್ಲೆ. ಅರಬ್ಬಿ ಸಮುದ್ರದಿಂದ ಆವರಿಸಿದ ಈ ಜಿಲ್ಲೆಯ ಕರಾವಳಿಗೆ ಮೀನುಗಾರಿಕೆ ಎನ್ನುವುದು ಸಹಜ ವೃತ್ತಿಯಾಗಿದೆ. ಸಾವಿರಾರು ಕುಟುಂಬಗಳು ಈ ವೃತ್ತಿಯನ್ನು ಆದರಿಸಿ ಜೀವನವನ್ನು ನಡೆಸುತ್ತಿದ್ದರು. ಆದರೆ ಮೀನುಗಾರಿಕೆ ಕುರಿತಂತೆ ಇಂದಿನಂತೆ ಪರ್ಸೀಯನ್ ದೋಣಿಗಳ ಬಳಕೆಯಾಗಲಿ, ಆಳ ಸಮುದ್ರದ ಮೀನುಗಾರಿಕೆಯಾಗಲಿ ಸ್ವಾತಂತ್ರ್ಯದ ಪೂರ್ವದಲ್ಲಿ ಹೆಚ್ಚಾಗಿ ಬೆಳೆದಿರಲಿಲ್ಲ. ನಾಡದೋಣಿಗಳು ಹಾಗೂ ನಾಡಬಲೆಗಳು ಮೀನುಗಾರಿಕೆಯ ಆಧಾರವಾಗಿರುವುದು ಕಾಣುತ್ತದೆ. ಮೀನುಗಾರರ ಬದುಕು ಸುಲಭವಾಗಿರಲಿಲ್ಲ. ತಾಂತ್ರಿಕತೆಯನ್ನು ಕಾಣದ ಮೀನುಗಾರಿಕೆಯ ಸಾಧನೋಪಕರಣಗಳು ಸಮುದ್ರದ ಗಾಳಿಯೊಂದಿಗೆ ಸೆಣೆಸಾಡುತ್ತಿದ್ದವು. ಎಲ್ಲವನ್ನು ಅಂದಿನ ಜನರು ಸಹಜವಾಗಿ ಸ್ವೀಕರಿಸುತ್ತಿದ್ದರು ಎನ್ನುವ ಅಂಶಗಳನ್ನು ನಾವು ಒಪ್ಪಿಕೊಳ್ಳಬೇಕಾಗಿದೆ.

ಹಿಂದಿನ ದಕ್ಷಿಣ ಕನ್ನಡ ಜಿಲ್ಲೆಯ ಶೈಕ್ಷಣಿಕ ಬೆಳವಣಿಗೆಗಳನ್ನು ಗಮನಿಸಿದರೆ ಶಿಕ್ಷಣವೆನ್ನುವುದು ಇಂದಿನಂತೆ ಸರ್ವವ್ಯಾಪಿಯಾಗಿರಲಿಲ್ಲ. ಈ ಜಿಲ್ಲೆಯ ಸಮಾಜವು ಪುರುಷ ಪ್ರಾಧಾನ್ಯತೆಯನ್ನು ಪಡೆದಿದ್ದ ಜಿಲ್ಲೆಯಾಗಿತ್ತು. ಇದಕ್ಕೆ ಸಮರ್ಥನೆಯನ್ನು ನೀಡುವುದಾದರೆ ಶಿಕ್ಷಣವೆನ್ನುವುದು ಕೇವಲ ಗಂಡು ಮಕ್ಕಳಿಗೆ ಮಾತ್ರ ಮೀಸಲಾಗಿತ್ತು. ಐತಿಹಾಸಿಕ ದಾಖಲೆಗಳನ್ನು ಹುಡುಕಿದಾಗ ಹೆಣ್ಣು ಮಕ್ಕಳು ಬಹುತೇಕ ಶಿಕ್ಷಣದಿಂದ ವಂಚಿತರಾಗಿದ್ದರು. ಈಪ್ರದೇಶದಲ್ಲಿ ಕೇಲವೇ ಕೆಲವು ಶಾಲೆಗಳಿದ್ದವು. ಉದಾಹರಿಸಬಹುದಾದರೆ, ಸಾರಸ್ವತರಿಂದ ಆರಂಭಗೊಂಡ ಗಣಪತಿ ಶಾಲೆ, ಹಾಗೂ ಗೌಡಸಾರಸ್ವತ ಸಮುದಾಯದಿಂದ ಪ್ರಾರಂಭಗೊಂಡ ಕೆನರಾ ಪ್ರೌಢಶಾಲೆ, ಜೆಸುವಿಟ್ ಪಾದ್ರಿಗಳಿಂದಲೇ ಪ್ರಾರಂಭಿಸಲ್ಪಟ್ಟ ಸಂತ ಅಲೋಸಿಯಸ್ ಕಾಲೇಜು ಮುಂತಾದುವುಗಳು ಜನರಲ್ಲಿ ಶಿಕ್ಷಣದ ಅಗತ್ಯಗಳ ಬಗ್ಗೆ ಅರಿವು ಮೂಡಿಸುವುದರ ಜೊತೆಗೆ, ಹೆಣ್ಣುಮಕ್ಕಳಿಗೂ ಶಿಕ್ಷಣ ಪಡೆಯುವ ಒಂದೆರಡು ಅವಕಾಶಗಳು ಎದುರಾಗಿರುವುದು ಕಂಡು ಬರುತ್ತದೆ. ಈ ನಿಟ್ಟಿನಲ್ಲಿ ಅನಿಬೆಸೆಂಟ್‌ರವರು ಆರಂಭಿಸಿದ ಬೆಸೆಂಟ್ ಬಾಲಿಕಾ ಪ್ರೌಢಶಾಲೆ, ಕೆನರಾ ಬಾಲಿಕೆಯರ ಪೌಢಶಾಲೆ ಮುಂತಾದವುಗಳು ಅಸ್ತಿತ್ವಕ್ಕೆ ಬಂದವು. ಆದರೆ ಜಿಲ್ಲೆಯ ಹಳ್ಳಿಗಳನ್ನು ಪರಿಶೀಲಿಸಿದಾಗ ಹಿಂದುಳಿದ ವರ್ಗದವರಿಗೆ ಓದಿನ ಮಹತ್ವವೇ ಗೊತ್ತಿರದ ಕಾಲ ಆದಾಗಿತ್ತು.

ಜಿಲ್ಲೆಯ ಆರ್ಥಿಕತೆಯನ್ನು ವಿಶ್ಲೇಷಿಸುವಾಗ ಬೀಡಿ ಉದ್ಯಮವು ಪ್ರಮುಖ ಸ್ಥಾನವನ್ನು ಪಡೆದಿರುವುದು ಕಂಡುಬರುತ್ತದೆ. ಬೀಡಿ ಉದ್ಯಮವು ಮಹಿಳೆಯರಿಗೆ ಆರ್ಥಿಕ ಸಬಲೀಕರಣದ ಮೂಲವಾಗಿರುವುದು ಕಂಡು ಬರುತ್ತದೆ. ಅನೇಕ ಬಡ ಮಹಿಳೆಯರು ಮನೆಗಳಲ್ಲೇ ಕುಳಿತು ಬೀಡಿ ಕಟ್ಟುವುದನ್ನು ರೂಢಿಸಿಕೊಂಡಿರುವುದು ಈ ಜಿಲ್ಲೆಯಲ್ಲಿ ಅಂದೂ ಇಂದೂ ಸಾಮಾನ್ಯ. ಇದರಿಂದ ಸಂಪಾದಿಸುವ ಹಣವು ಕುಟುಂಬಕ್ಕೆ ಆಧಾರವನ್ನು ಒದಗಿಸಿದೆ. ಇಂತಹ ಕೆಲವು ಉದ್ಯಮಗಳಿಂದಾಗಿ ಕೆಳವರ್ಗದ ಮಹಿಳೆಯರು ಶಿಕ್ಷಣಕ್ಕೆ ಹೆಚ್ಚು ಒಲವನ್ನು ತೋರಿಸಲಿಲ್ಲ ಎನ್ನುವುದನ್ನು ಬರಹಗಾರ ಕೇಶವ ಉಚ್ಚಿಲರು ತಮ್ಮ ವಿಶ್ಲೇಷಣೆಯಲ್ಲಿ ತೋರಿಸಿದ್ದಾರೆ[೬].

೧೮೬೦ ರಲ್ಲಿ ಬ್ರಿಟಿಷರಿಂದ ವಿಭಜಿಸಲ್ಪಡುವವರೆಗೆ ದಕ್ಷಿಣಕನ್ನಡವು ಒಳಗೊಂಡಂತೆ ಕರಾವಳಿ ಜಿಲ್ಲೆಯೆಂದೇ ಪ್ರಖ್ಯಾತವಾಗಿತ್ತು. ಪೋರ್ಚುಗೀಸರು ತಮ್ಮ ಅನುಕೂಲಕ್ಕಾಗಿ 'ಕೆನರಾ' ಎಂದು ಕರೆದರು. ಮುಂದೆ ಆಡಳಿತದ ಅನುಕೂಲಕ್ಕಾಗಿ ಬ್ರಿಟಿಷರು ಉತ್ತರ ಮತ್ತು ದಕ್ಷಿಣಕನ್ನಡಗಳೆಂದು ವಿಭಜಿಸಿಕೊಂಡರು. ಅಂದಿನ ಕರಾವಳಿ ಜಿಲ್ಲೆಯೆಂದರೆ ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು ಜಿಲ್ಲೆಗಳವರೆಗೆ ಬಹುವ್ಯಾಪಕವಾಗಿ ಹರಡಿದ್ದ ಜಿಲ್ಲೆಯಾಗಿತ್ತು ಎನ್ನಲಾಗಿದೆ.

ಶತಮಾನದ ಹಿಂದೆ ದಕ್ಷಿಣಕನ್ನಡ ಜಿಲ್ಲೆಗೆ ಬ್ರಾಹ್ಮಣರ ಆಗಮನವಾಯಿತೆಂದು ತಿಳಿದು ಬರುತ್ತದೆ. ಈ ಜಿಲ್ಲೆಯಲ್ಲಿ ಬೌದ್ಧಧರ್ಮದ ಪ್ರಭಾವಗಳು, ಮೂಡಬಿದಿರೆ ಕಾರ್ಕಳಗಳಲ್ಲಿ ಜೈನಧರ್ಮದ ಪ್ರಭಾವವೂ ಕಂಡು ಬರುತ್ತದೆ. ಹದಿಮೂರನೆಯ ಶತಮಾನದಲ್ಲಿ ಆಚಾರತ್ರಯರಲ್ಲಿ ಒಬ್ಬರಾದ ಮಧ್ವಾಚಾರ್ಯರಿಂದ ಆರಂಭಗೊಂಡ ದ್ವೈತ ಮತ ಸಾಕಷ್ಟು ಪ್ರಸಿದ್ಧಿಯನ್ನು ಪಡೆಯಿತು. ಅದರ ಜೊತೆಯಲ್ಲಿಯೇ ವೀರ ಶೈವ ಮತದ ಪ್ರಭಾವವಿತ್ತೆಂದು ಕಂಡುಬರುತ್ತದೆ.

ಜಿಲ್ಲೆಗೆ ಕ್ರೈಸ್ತ ಮಿಶನರಿಗಳ ಕೊಡುಗೆ ಅಪಾರವಾಗಿದೆ. ಈ ಮಿಶನರಿಗಳ ಆಗಮನದಿಂದ ಜಿಲ್ಲೆಯು ಕೆಲವು ಅಭಿವೃದ್ಧಿಯನ್ನು ಕಂಡಿದೆ ಎನ್ನುವುದು ಅತಿಶಯೋಕ್ತಿಯಲ್ಲ. ಬಾಸೆಲ್ ಮಿಶನರಿಯವರು ದಕ್ಷಿಣಕನ್ನಡ ಜಿಲ್ಲೆಯ ಜನರಿಗೆ ಶಿಕ್ಷಣದ ಮಹತ್ವವನ್ನು ತಿಳಿಸಿದ್ದಲ್ಲದೆ ಉದ್ಯಮ ಶೀಲತೆಯನ್ನು ಕಲ್ಪಿಸಿಕೊಟ್ಟರು. ೧೯ನೇ ಶತಮಾನದ ಕೊನೆಯಲ್ಲಿ ಈ ಜಿಲ್ಲೆಯು ಕೈಗಾರಿಕಾಭಿವೃದ್ಧಿಯನ್ನು ಕಂಡಿತು. ಕಬ್ಬಿಣದ ಕಾರ್ಖಾನೆ, ಹಂಚಿನ ಕಾರ್ಖಾನೆ, ಮುದ್ರಣಾಲಯಗಳು, ಗೇರು ಬೀಜ ಕಾರ್ಖಾನೆಗಳು, ನೈಗೆ, ಕೈಮಗ್ಗಗಳು, ಇತ್ಯಾದಿ ಜನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿತು ಎಂದು ಬಾಸೆಲ್ ಮಿಶನಿನ ಮೂಲಗಳು ತಿಳಿಸುತ್ತವೆ. ಮಂಗಳೂರಿನ ಹಂಚು ಜಗತ್ಪ್ರಸಿದ್ಧಿಯನ್ನು ಪಡೆಯಿತು.

ಆ ಸಮಯದ ಇನ್ನೊಂದು ಸಾಧನೆ ಎಂದರೆ ಗೇರುಬೀಜ ಉದ್ಯಮ. ಇಡೀ ಭಾರತ ದೇಶದಲ್ಲಿ ಪ್ರಥಮವಾಗಿ ಗೇರು ಉದ್ದಿಮೆ ಆರಂಭಗೊಂಡಿರುವುದು ಮಂಗಳೂರಿನಲ್ಲಿಯೇ. ಜೊತೆಜೊತೆಯಲ್ಲಿ ಹೋಟೆಲ್ ಉದ್ಯಮಗಳು ಈ ಜಿಲ್ಲೆಯಲ್ಲಿ ಜನಪ್ರಿಯತೆಯನ್ನು ಪಡೆಯಿತು. ಪರಿಶಿಷ್ಟ ಜಾತಿ, ಮತ್ತು ವರ್ಗಗಳು ಸಾಂಪ್ರದಾಯಿಕ ಕಸುಬುಗಳನ್ನು ಅನುಸರಿಸಿದ್ದರು ಎನ್ನಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣದ ಮೂಲಕ ಸಾಮಾಜಿಕ ಪ್ರಜ್ಞೆಯು ಅರಳಿತು. ಸಾಮಾಜಿಕ ಕ್ಷೇತ್ರಗಳಲ್ಲಿ ಸಹಕಾರದಿಂದ ಕೂಡಿ ಬದುಕುವ ಕಲೆಯನ್ನು ಅಂದಿನ ಕೆಲವು ನಾಯಕರು ಮನಗಂಡಿದ್ದರು. ಉದಾಹರಿಸಬಹುದಾದರೆ ಸಹಕಾರ ಸಂಘಗಳ ಚಳುವಳಿಯ ನೇತಾರರಾಗಿದ್ದ ಮೊಳಹಳ್ಳಿ ಶಿವರಾಯರು ಈ ಜಿಲ್ಲೆಯು ಕೃಷಿಕರ ಸಹಕಾರಿ ಮಾರಾಟ ಸಂಘ, ಸಹಕಾರಿ ಬ್ಯಾಂಕುಗಳನ್ನು ಕಂಡಿದೆ. ಸಹಕಾರಿ ಕ್ಷೇತ್ರಗಳಲ್ಲಿ ಶಿವರಾಯರ ಜೊತೆಗೆ ಮಾಣಿ ಶ್ರೀನಿವಾಸರಾಯರು, ಬಂಟವಾಳ ನಾರಾಯಣ ನಾಯಕರು ಪ್ರಮುಖರಾಗಿದ್ದರು ಎನ್ನಲಾಗಿದೆ[೮]. ಇಂತವರ ನಾಯಕತ್ವದಿಂದ ದಕ್ಷಿಣಕನ್ನಡ ಜಿಲ್ಲೆಯು ಸ್ವಾತಂತ್ರ್ಯ ಪೂರ್ವದಲ್ಲಿ ಜನರನ್ನು ಸ್ವಾವಲಂಬನೆಯತ್ತ ಕೊಂಡೊಯ್ಯುವ ಪ್ರಯತ್ನಗಳನ್ನು ಮಾಡಿರುವುದು ವಿಶೇಷವಾಗಿ ಸಂಶೋಧಕರ ಗಮನ ಸೆಳೆಯುತ್ತದೆ.

### ೧.೩. ಆಧುನಿಕ ದಕ್ಷಿಣ ಕನ್ನಡ

ಸ್ವಾತಂತ್ರ್ಯ ನಂತರ ೧೯೫೬ ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಕಾಸರಗೋಡು ಪ್ರದೇಶವು ದಕ್ಷಿಣಕನ್ನಡ ದಿಂದ ಪ್ರತ್ಯೇಕಿಸಲ್ಪಟ್ಟಿತು. ಉಡುಪಿಯೂ ಸೇರಿದಂತೆ ದಕ್ಷಿಣಕನ್ನಡ. ಜಿಲ್ಲೆಯು ಅಸ್ತಿತ್ವಕ್ಕೆ ಬಂದಿತ್ತು. ಆದರೆ ೧೯೯೭ ರಲ್ಲಿ ಉಡುಪಿಯನ್ನು ದಕ್ಷಿಣಕನ್ನಡ ದಿಂದ ಬೇರ್ಪಡಿಸಿ ಪ್ರತ್ಯೇಕ ಜಿಲ್ಲೆಯಾಗಿ ಪರಿಗಣಿಸಲಾಯಿತು. ಇದೆಲ್ಲವೂ ದಕ್ಷಿಣಕನ್ನಡ. ಜಿಲ್ಲೆಯು ಕಂಡಿರುವ ಸೂಕ್ಷ್ಮ ರಾಜಕೀಯ ಬೆಳವಣಿಗೆಗಳಾಗಿವೆ. ವ್ಯವಸಾಯ, ಮೀನುಗಾರಿಕೆ, ಹಾಗೂ ಬ್ಯಾಂಕಿಂಗ್ ಉದ್ಯಮಗಳು ಶತಮಾನದ ಪರಂಪರೆಯನ್ನು ಕಂಡಿದ್ದರೂ ಸ್ವಾತಂತ್ರ್ಯದ ನಂತರದ ದಿನಗಳಲ್ಲಿ ಜಿಲ್ಲೆಯು ಬಹಳಷ್ಟು ಆಧುನಿಕತೆಗೆ ತೆರೆದುಕೊಂಡಿದೆ. ಕೃಷಿಗೆ ಈ ಭಾಗದ ಜನತೆ ಹೆಚ್ಚಿನ ಆಸಕ್ತಿ ಇತ್ತೀಚೆಗೆ ತೋರುತ್ತಿಲ್ಲ. ವಾಣಿಜ್ಯ ಉದ್ದೇಶಗಳಿಗೆ ಕೃಷಿಯ ಭೂಮಿಯು ಬಳಕೆಯಾಗಿದೆ. ದಕ್ಷಿಣಕನ್ನಡ ಜಿಲ್ಲೆಯ ಕೈಗಾರಿಕಾ ಅಭಿವೃದ್ಧಿಯನ್ನು

ಗುರುತಿಸುವುದಾದರೆ ನವಮಂಗಳೂರು ಬಂದರು ಈ ಜಿಲ್ಲೆಯ ಅಭಿವೃದ್ಧಿಯ ಹೆಬ್ಬಾಗಿಲು ಎಂದು ಕರೆಯಬಹುದಾಗಿದೆ. ದಕ್ಷಿಣಕನ್ನಡ ಜಿಲ್ಲೆಯು ಅಭಿವೃದ್ಧಿಯನ್ನು ಹೊಂದುವ ಹಾದಿಯಲ್ಲಿ ಬಜಪೆಯ ವಿಮಾನ ನಿಲ್ದಾಣ, ರಾಷ್ಟ್ರೀಯ, ರಾಜ್ಯ ಹೆದ್ದಾರಿಗಳು, ರೈಲ್ವೆ ಸಂಪರ್ಕಗಳು, ಮಹತ್ವದ ಸೌಲಭ್ಯಗಳು, ಕಾರ್ಖಾನೆಗಳು, ಒ.ಎನ್.ಜಿ.ಸಿ., ಮಣಿಪಾಲ ಪವರ್ ಪ್ರೆಸ್ ಸಂಸ್ಥೆ ಇತ್ಯಾದಿಗಳು ವಿಶೇಷವಾಗಿ ಅಭಿವೃದ್ಧಿಯ ಪರಂಪರೆಯನ್ನು ಹಾಕಿ ಕೊಟ್ಟಿರುವುದು ಕಂಡು ಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯು ಮಾಹಿತಿ ತಂತ್ರಜ್ಞಾನಕ್ಕೂ ತೆರೆದುಕೊಂಡ ಜಿಲ್ಲೆಯಾಗಿದೆ. ಉದಾರಿಕರಣ, ಖಾಸಗಿಕರಣ, ಜಾಗತಿಕರಣದ ಇಂದಿನ ದಿನಗಳಲ್ಲಿ ದಕ್ಷಿಣಕನ್ನಡ ಜಿಲ್ಲೆಯು ಸಾಧಿಸಿರುವ ಪ್ರಗತಿ ಮಾನ್ಯತೆಯನ್ನು ಪಡೆದಿದೆ. ದಶಕದ ಹಿಂದೆ ಇನ್ಫೋಸಿಸ್ ಟೆಕ್ನಾಲಜಿ ಮಂಗಳೂರಿನಲ್ಲಿ ಆರಂಭಗೊಂಡಿತು. ಜಿಲ್ಲೆಯ ಯುವ ಜನತೆಗೆ ಸಾಫ್ಟ್‌ವೇರ್ ರಂಗದಲ್ಲೂ ಸಾಕಷ್ಟು ಅವಕಾಶಗಳು ಲಭ್ಯವಾದವು. ಮುಂದಿನ ಹತ್ತು ವರ್ಷಗಳಲ್ಲಿ ಈ ಜಿಲ್ಲೆಯು ಕೋಟ್ಯಾಂತರ ರೂಪಾಯಿಗಳ ವ್ಯವಹಾರವನ್ನು ನಡೆಸಬಹುದೆಂಬ ಆಶಾಭಾವನೆಯನ್ನು ಕಾಣಬಹುದು. ತಂತ್ರಜ್ಞಾನದ ಅವಕಾಶಗಳು ಪ್ರತಿಭಾವಂತರಿಗೆ ಗೌರವಯುತವಾದ ಸ್ಥಾನಮಾನಗಳನ್ನು ನೀಡುತ್ತಿದೆ.

೭೦ ರ ದಶಕದ ನಂತರ ಮೀನುಗಾರಿಕೆಯು ಈ ಜಿಲ್ಲೆಯಲ್ಲಿ ಮಹತ್ವಪೂರ್ಣ ಬದಲಾವಣೆ ಕಂಡಿತು. ಮತ್ಸ್ಯೋದಮವು, ಟ್ರಾಲ್ ಬೋಟ್, ಗಿಲ್‌ನೆಟ್, ಕೈರಂಪೊರ್ ಮುಂತಾದ ವೈವಿಧ್ಯಗಳನ್ನು ಕಂಡಿದೆ. ಐಸಿಂಗ್, ಫ್ರಿಜಿಂಗ್ ಹಾಗೂ ಕ್ಯಾನಿಂಗ್ ಮುಂತಾದ ಆಧುನಿಕ ಸಂಸ್ಕರಣಾ ವಿಧಾನಗಳು ಮೀನುಗಾರಿಕೆಯಲ್ಲಿ ಅಳವಡಿಸಲ್ಪಟ್ಟಿದೆ. ಸ್ವಾತಂತ್ರ್ಯೋತ್ಸವದ ನಂತರ ಶೈಕ್ಷಣಕ ಪ್ರಗತಿಯನ್ನು ಗುರುತಿಸುವುದಾದರೆ ಮೊದಲಿನಿಂದಲೂ ಈ ಜಿಲ್ಲೆಯು ಸಾಕ್ಷರತೆಯನ್ನು ಪಡೆದಿದ್ದು, ಮಣಿಪಾಲ, ಮಂಗಳೂರು ಉನ್ನತ ಹಾಗೂ ವೃತ್ತಿಪರ ಶಿಕ್ಷಣದ ಮಹತ್ತರ ಕೇಂದ್ರವಾಗಿ ಬೆಳೆದಿದೆ. ''ಶಿಕ್ಷಣವೇ ಶಕ್ತಿ'' ಎಂಬುದು ಜಿಲ್ಲೆಯು ಅನುಸರಿಸುವ ತತ್ವವೆಂದರೆ ತಪ್ಪಾಗಲಾರದು. ಆದರ್ಶಯುತ ಶಿಕ್ಷಣಕ್ಕಾಗಿ ಸಮಾಜ ಸೇವಕರು ಹಾಗೂ ಸೇವಾ ಮನೋಭಾವದ ನಾಯಕರು ಪ್ರಯತ್ನಿಸಿರುವುದಕ್ಕೆ ಬಹಳಷ್ಟು ಸಾಕ್ಷಿಗಳು ಅಧ್ಯಯನಕ್ಕೆ ಸಿಗುತ್ತದೆ. ಹೀಗೆ ಜಿಲ್ಲೆಯು ನಾನಾ ಕ್ಷೇತ್ರಗಳಲ್ಲಿ ಸಾಕಷ್ಟು ಅಭಿವೃದ್ಧಿಯನ್ನು ಸಾಧಿಸುತ್ತಿದೆ.

## ೧.೪. ಅಭಿವೃದ್ಧಿ ಮತ್ತು ನಾಯಕತ್ವ

ಒಂದು ಕ್ಷೇತ್ರದ ಬೆಳವಣಿಗೆಯು ತಾನಾಗಿಯೇ ರೂಪುಗೊಳ್ಳುವುದಿಲ್ಲ. ವಿವಿಧ ಸಂಪನ್ಮೂಲಗಳನ್ನು ಕ್ರೋಡಿಕರಿಸಿಕೊಂಡು ನಿಗಧಿತ ಕ್ಷೇತ್ರಗಳಲ್ಲಿ ಅಭಿವೃದ್ಧಿಯನ್ನು ತರುವ ದೂರ ದರ್ಶಿತ್ವವನ್ನು ಹಾಗೂ ಸಾಮಾಜಿಕ ಕಳಕಳಿಯನ್ನು ಹೊಂದಿರುವ ನಾಯಕತ್ವವು ಅಷ್ಟೇ ಪ್ರಮುಖ ಸ್ಥಾನವನ್ನು ಪಡೆದಿರುತ್ತದೆ. ಆ ಪ್ರದೇಶದ ಅಭಿವೃದ್ಧಿಗಾಗಿ ಸ್ವ ಇಚ್ಛೆಯಿಂದ ಹಾಗೂ ಉತ್ಸಾಹದಿಂದ ದುಡಿಯುವ ನಾಯಕತ್ವವು ಮಹತ್ವದ ಪಾತ್ರವನ್ನು ಪಡೆಯುತ್ತದೆ. ಪಟ್ಟಾಭಿರಾಮನ್‌ರವರ ಪ್ರಕಾರ ''ಒಂದು ಪ್ರದೇಶದ ನಿರ್ವಹಣೆಗೆ ನಾಯಕತ್ವದಲ್ಲಿ ಕೆಲವಾರು ಅಗತ್ಯತೆಗಳಿರಬೇಕಾಗುತ್ತದೆ. ಆ ಪ್ರದೇಶಕ್ಕೆ ಸಂಬಂಧಿಸಿದಂತೆ ಸಂಪೂರ್ಣ ತಿಳುವಳಿಕೆ, ವ್ಯವಹಾರ ಚಾತುರ್ಯ, ಯೋಜನೆಗಳ ರಚನೆ, ಆಂತರಿಕ

ಬಾಂಧವ್ಯಗಳ ನಿರ್ವಹಣೆ ಉಸ್ತುವಾರಿಕೆ ಮತ್ತು ಮೇಲ್ವಿಚಾರಣೆ, ಮತ್ತು ಇತರರನ್ನು ಅಭಿವೃದ್ಧಿ ಕಲ್ಪನೆಗೆ ಸೆಳೆಯುವಿಕೆ, ಸಂಪನ್ಮೂಲಗಳ ಸಮನ್ವಯತೆ ಮುಂತಾದುವುಗಳ ಅರಿವು ನಾಯಕನಿಗಿರಬೇಕಾಗುತ್ತದೆ''.

ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗಾಗಿ ಸೇವಾಮನೋಭಾವವಿದ್ದ ಅನೇಕ ನಾಯಕರು ಪ್ರಯತ್ನಿಸಿರುವರು. ಸೂಕ್ತ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ, ನಿರ್ಣಾಯಗಳನ್ನು ತೆಗೆದುಕೊಳ್ಳುವುದರಲ್ಲಿ ಸಂಪನ್ಮೂಲಗಳನ್ನು ಬಳಸಿಕೊಳ್ಳುವುದರಲ್ಲಿ ಉಳ್ಳಾಲ ಶ್ರೀನಿವಾಸ ಮಲ್ಯ, ಡಾ। ಟಿ. ಎಂ ಎ ಪೈ, ಅಮ್ಮೆಂಬಳ ಸುಬ್ಬರಾವ್ ಪೈ, ಹಾಜಿ ಅಬ್ದುಲ್ಲಾ, ಹಾಜಿ ಕಾಸಿಂ ಸಾಹೇಬ್ ಮುಂತಾದವರನ್ನು ನೆನೆಸಿಕೊಳ್ಳಬೇಕಾಗುತ್ತದೆ. ಅಂತಹ ದಾರ್ಶನಿಕರ ನೇತ್ರತ್ವದಲ್ಲಿ ದಕ್ಷಿಣಕನ್ನಡ ಜಿಲ್ಲೆಯು ಬೆಳೆದಿದೆ.

ಅಭಿವೃದ್ಧಿ ಕುರಿತಂತೆ ಸೇವಾ ಮನೋಭಾವನೆಯಿಂದ ಮುಂದಾದ ಹಲವಾರು ವ್ಯಕ್ತಿಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡು ಬರುತ್ತಾರೆ. ಅವರ ಕೊಡುಗೆಗಳನ್ನು ಗುರುತಿಸುವುದು ಬಹುಮುಖ್ಯವಾಗಿದೆ. ಒಂದು ಸಮುದಾಯ ಅಥವಾ ಪ್ರದೇಶವನ್ನು ಪೋಷಿಸಿ ಬೆಳೆಸುವ ಜವಾಬ್ದಾರಿಯು ಬೆರಳೆಣಿಕೆಯಷ್ಟು ಜನರಿಗೆ ಮಾತ್ರ ಸಾಧ್ಯವಾಗುತ್ತದೆ. ಈ ಜಿಲ್ಲೆಯ ಅಭಿವೃದ್ಧಿಗೆ ತೊಡಗಿಸಿಕೊಂಡ ನಾಯಕರು ಸಾಮಾಜಿಕ ಕಳಕಳಿಯಿಂದ, ಜನಪರ ಕಾಳಜಿಯಿಂದ, ಸ್ವಯಂಪ್ರೇರಣೆಯಿಂದ ಕ್ರಿಯಾಶೀಲರಾಗಿರುತ್ತಾರೆ ಎನ್ನುವುದು ಅವರ ಸಾಧನೆಗಳನ್ನು ಪರಿಶೀಲಿಸಿದಾಗ ಕಂಡುಬರುತ್ತದೆ. ಪ್ರತಿ ಸಮುದಾಯದಲ್ಲೂ ಅಂತಹ ವ್ಯಕ್ತಿಗಳು ಲಭ್ಯ. ಶೈಕ್ಷಣಿಕ ಕ್ಷೇತ್ರಕ್ಕೆ, ಬ್ಯಾಂಕಿಗ್ ಕ್ಷೇತ್ರಕ್ಕೆ, ಕೈಗಾರಿಕಾ ಅಭಿವೃದ್ಧಿಗಳಿಗೆ ಉತ್ತಮ ನಾಯಕತ್ವವನ್ನು ನೀಡಿದ ಹಲವರ ಬಗ್ಗೆ ದಾಖಲೆಗಳಿವೆ. ಸ್ವಾತಂತ್ರ್ಯ ಚಳುವಳಿಗಳಲ್ಲೂ ಈ ಭಾಗದ ಸ್ವಯಂ ಪ್ರೇರಿತ ನಾಯಕರು ಪಾಲ್ಗೊಂಡಿದ್ದಾರೆ ಎನ್ನುವುದು ಚರಿತ್ರೆಯ ಹುಡುಕಾಟದಿಂದ ತಿಳಿದುಕೊಳ್ಳ ಬಹುದಾಗಿದೆ.

### ೧.೫. ನಾಯಕತ್ವದ ಪರಾಮರ್ಶನ ಅಧ್ಯಯನ ಮತ್ತು ಸಂಶೋಧನೆಯ ವಸ್ತು ವಿಷಯದ ಸಮರ್ಥನೆ

ದಕ್ಷಿಣ ಕನ್ನಡ ಜಿಲ್ಲೆಯ ಶತಮಾನದ ಮಹಾನ್ ಪ್ರತಿಭೆಗಳು ಎಂಬ ಕೃತಿಯಲ್ಲಿ ಅನೇಕ ನಾಯಕರ ಕೊಡುಗೆಗಳನ್ನು ಗುರುತಿಸಲಾಗಿದೆ.

ಗಾಂಧೀಜಿಯವರ ನಾಯಕತ್ವದಲ್ಲಿ ೧೯೨೦–೨೧ ರಲ್ಲಿ ಉಪ್ಪಿನ ಸತ್ಯಾಗ್ರಹ ನಡೆದಾಗ ದಕ್ಷಿಣ ಕನ್ನಡ ಜಿಲ್ಲೆಯ ಹಲವಾರು ನಾಯಕರು ಭಾಗವಹಿಸಿದ್ದರು. ಜಿಲ್ಲೆಯ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಮಹಾತ್ಮರ ಮುಂದಾಳುತನದಲ್ಲಿ ಕಾಂಗ್ರೆಸ್ ಸಂಸ್ಥೆಯನ್ನು ಸ್ಥಾಪಿಸಿದವರು ಕಾರ್ನಾಡು ಸದಾಶಿವರಾಯರು. ಶ್ರೀಮಂತ ತಂದೆಯ ಏಕಮಾತ್ರ ಪುತ್ರನಾಗಿ ಸ್ವತಃ ಶ್ರೇಷ್ಟ ವಕೀಲರಾಗಿ ಮಾತೃಭೂಮಿಯ ಬಿಡುಗಡೆಗಾಗಿ ಗಾಂಧೀಜಿಯವರ ಕರೆಯಂತೆ ಅಸಹಕಾರಾಂದೋಲನಕ್ಕೆ ದುಮುಕಿ ಹೋರಾಡಿ ಕೊನೆಗೆ ಸರ್ವಸ್ವ ವನ್ನೂ ಕಳೆದುಕೊಂಡ ಮಹಾನ್ ನಾಯಕರು ಕಾರ್ನಾಡು ಸದಾಶಿವರಾಯರು. ದೇಶದ ಸ್ವಾತಂತ್ರ್ಯಕ್ಕಾಗಿ, ದೀನದಲಿತರ ಹಾಗೂ ಮಹಿಳೆಯರ ಏಳಿಗೆಗಾಗಿ ತನು ಮನ ಧನವನ್ನು ತ್ಯಾಗ ಮಾಡಿದ

ಧೀಮಂತರು. ಒಬ್ಬ ಮಹಾನ್ ನಾಯಕನಲ್ಲಿರ ಬೇಕಾದ ಎಲ್ಲಾ ಗುಣಗಳು ಇವರಲ್ಲಿದ್ದವು ಎನ್ನುವುದನ್ನು ತಿಳಿದುಕೊಳ್ಳಬಹುದಾಗಿದೆ[೧೦].

ಮಂಗಳೂರಿನ ಸಾರಸ್ವತ ಕುಟುಂಬದಲ್ಲಿ ಜನಿಸಿ, ಸ್ವಾತಂತ್ರ್ಯ ಚಳವಳಿ ಹಾಗೂ ಸಮಾಜವಾದ ಚಳುವಳಿಯ ಅಗ್ರಗಣ್ಯ ನಾಯಕಿಯಾಗಿ ಬಹುಮುಖ ಪ್ರತಿಭೆಯಿಂದ ಹಲವು ರಂಗಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ಮಹಾನ್ ನಾಯಕರಲ್ಲಿ ಕಮಲಾದೇವಿ ಚಟ್ಟೋಪಾದ್ಯಾಯರು ಒಬ್ಬರು ಎಂಬುದು ಕಂಡು ಬರುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರ ನೇರ ಹೋರಾಟಕ್ಕೆ ಆಸ್ಪದವಿಲ್ಲದಿದ್ದಾಗಲೂ, ಚಳುವಳಿಗೆ ದುಮುಕಿ, ಮಹಿಳಾ ಸಂಘಟನೆಯನ್ನು ತೀವ್ರಗೊಳಿಸಿ ಕೊನೆಯವರೆಗೆಗೂ ಸಕ್ರೀಯವಾಗಿದ್ದಂತವರು. ಕೃಷಿಕರ ಸಮಸ್ಯೆಗಳು ಪರಿಹಾರವಾದಾಗಲೆ ಭಾರತದ ಅಭಿವೃದ್ಧಿ, ಜನತೆಯ ಅಭಿವೃದ್ಧಿಯಾಗಲು ಸಾಧ್ಯವೆಂದು ತಿಳಿದುಕೊಂಡಿದ್ದರು. ಕೃಷಿಕ್ಷೇತ್ರದ ಹಾಗೂ ಹಳ್ಳಿಗಳ ಕರಕುಶಲ ಕಲೆಗಳ ಅಭಿವೃದ್ಧಿಗೆ ಕೊನೆಯವರೆಗೂ ಶ್ರಮಿಸಿದರು ಎನ್ನುವುದು ಕಾಣುತ್ತದೆ. ಭಾರತೀಯ ಸಮಾಜವಾದಿ ಮತ್ತು ಮಹಿಳಾ ಸಂಘಟನೆಗೆ ಹೊಸ ಆಯಾಮವನ್ನು ನೀಡಿ ಆದರ್ಶಪ್ರಾಯರಾದರು[೧೧].

ಜಿಲ್ಲೆಯ ಮತ್ತೊಬ್ಬ ಮಹಾನ್ ನಾಯಕರು ಡಾ। ತೋನ್ಸೆ ಅನಂತ ಮಾಧವ ಪೈ (ಟಿ ಎಂ ಎ ಪೈ) ಇವರು ಮಾಡಿದ ಸಾಧನೆಯು ವಿಶಿಷ್ಟವಾದದ್ದು. ಆರ್ಥಿಕ, ಶೈಕ್ಷಣಿಕ ಹಾಗೂ ಉದ್ಯಮ ಕ್ಷೇತ್ರಗಳಲ್ಲಿ ಅದ್ವಿತೀಯ ಸಾಧನೆ ಮಾಡಿ ಆಧುನಿಕ ಮಣಿಪಾಲದ ಮಹಾನ್ ಶಿಲ್ಪಿಗಳಾಗಿ ಭಾರತ ಸರ್ಕಾರದ ಪದ್ಮಶ್ರಿ ಪ್ರಶಸ್ತಿಯನ್ನು ಸ್ವೀಕರಿಸಿದ್ದಾರೆ. ಮಣಿಪಾಲವನ್ನು ಒಂದು ಉತ್ಕ್ರಷ್ಟ ಶೈಕ್ಷಣಿಕ ಕೇಂದ್ರವನ್ನಾಗಿ, ಆರೋಗ್ಯ ಕೇಂದ್ರವನ್ನಾಗಿ ವಾಣಿಜ್ಯ ಹಾಗೂ ಉದ್ದಿಮೆಗಳ ಕೇಂದ್ರವನ್ನಾಗಿ ಅಭಿವೃದ್ಧಿಗೊಳಿಸಿದ ಕೀರ್ತಿಯು ಡಾ। ಟಿ ಎಂ ಪೈಯವರಿಗೆ ಸಲ್ಲುತ್ತದೆ. ದಕ್ಷಿಣಕನ್ನಡ ಜಿಲ್ಲೆಯ ಶೈಕ್ಷನಿಕ ರಂಗದಲ್ಲಿ ಕ್ರಾಂತಿಯನ್ನು ಮಾಡಿ ಭಾರತದ ಮೊತ್ತ ಮೊದಲ ಖಾಸಗಿ ವೈದ್ಯಕೀಯ ಕಾಲೇಜನ್ನು ತೆರೆದ ಯಶಸ್ಸು ಇವರಿಗೆ ಸಲ್ಲುತ್ತದೆ.

ದಿ ತೋನ್ಸೆ ಅನಂತ ಪೈ (ಟಿ. ಎ. ಪೈ) ಶ್ರೇಷ್ಟ ಆರ್ಥಿಕ ತಜ್ಞರಾಗಿ ಮತ್ತು ಕೇಂದ್ರ ಸರಕಾರದ ಮಂತ್ರಿಗಳಾಗಿ ಅಗ್ರಗಣ್ಯ ಸೇವೆ ಸಲ್ಲಿಸಿದ ಜಿಲ್ಲೆಯ ಮಹಾನ್ ನಾಯಕರು ಎನ್ನುವುದ ಕಾಣುತ್ತದೆ, ಬ್ಯಾಂಕಿಗೆ ವ್ಯವಸ್ಥೆಯನ್ನು ಸಾಮಾಜಿಕ ಅಭಿವೃಧ್ಧಿಯಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿದವರು. ಕಳೆದ ೨೦ ಶತಮಾನದಲ್ಲಿ ನಾಡಿನ ಹಾಗೂ ದಕ್ಷಿಣಕನ್ನಡ ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಗೆ ಅಪಾರ ಕೊಡುಗೆ ನೀಡಿದ್ದಾರೆ ಎಂಬುದು ಕಂಡುಬರುತ್ತದೆ. ಗ್ರಾಮಾಭಿವೃಧ್ಧಿ ಹಾಗೂ ಹಸಿರು ಕ್ರಾಂತಿಗೆ ಭದ್ರ ಅಡಿಪಾಯ ಹಾಕಿ, ದಕ್ಷಿಣ ಕನ್ನಡ ಜಿಲ್ಲೆಯನ್ನು ಗುಜರಾತಿನ ಖೈರಾ ಜಿಲ್ಲೆಯಂತೆ ಅಮುಲ್ ಮಾದರಿಯ ಹಾಲು ಉತ್ಪಾದನಾ ಘಟಕವನ್ನಾಗಿ ಮಾಡಬೇಕೆನ್ನುವುದು ಇವರ ಉದ್ದೇಶವಾಗಿತ್ತು. ಜೀವವಿಮಾ ಪ್ರತಿಷ್ಟಾನದ ಅಧ್ಯಕ್ಷರಾಗಿ ಜನಹಿತದ ನವೀನ ಯೋಜನೆಗಳನ್ನು ರೂಪಿಸಿದರು. ಇಂದಿರಾಗಾಂಧಿ ನೇತೃತ್ವದ ಕೇಂದ್ರ ಸಚಿವ ಸಂಪುಟದಲ್ಲಿ ರೈಲ್ವೆ ಸಚಿವರಾಗಿ ಉದ್ದಿಮೆಗಳ ಸಚಿವರಾಗಿ, ಕೈಗಾರಿಕೆ ಮತ್ತು ನಾಗರಿಕ ಸರಬರಾಜು ಸಚಿವರಾಗಿ ಗಣನೀಯ ಸೇವೆಯನ್ನು ಸಲ್ಲಿಸಿರುವುದು ಗಮನಾರ್ಹ. ಮಲ್ಪೆಯ ಫಿಶರೀಶ್ ಕಾಲೇಜು, ದಕ್ಷಿಣ ಕನ್ನಡ ಜಿಲ್ಲಾ ಕೃಷಿ

ಅಭಿವೃದ್ಧಿ ಸಂಘಗಳ ಸ್ಥಾಪನೆಯಲ್ಲಿ ಮಹತ್ತರ ಪಾತ್ರ ವಹಿಸಿದ್ದಾರೆ. ಟಿ.ಎ.ಪೈಗಳಂತಹ ಮುತ್ಸದ್ದಿ, ಕಾರ್ಯಶೀಲ ನಾಯಕರು ಶತಮಾನಕ್ಕೊಬ್ಬರು ಬರುತ್ತಾರೆ ಎಂಬುದನ್ನು ಕಂಡುಕೊಳ್ಳಬಹುದು[೧೨].

ದಕ್ಷಿಣ ಕನ್ನಡ ಜಿಲ್ಲೆಯ ಮತ್ತೊಬ್ಬ ನಾಯಕರು ದಿ. ಕುದ್ಮುಲ್ ರಂಗರಾಯರು. ದೀನ ದಲಿತರ ಹಾಗೂ ಮಹಿಳೆಯರ ಉದ್ಧಾರಕ್ಕಾಗಿ ಸತತವಾಗಿ ದುಡಿದಿರುವುದು ಕಂಡುಬರುತ್ತದೆ. ಅನಾದಿಕಾಲದಿಂದಲೂ ನಮ್ಮ ಹಿಂದು ಸಮಾಜವು ಕೆಟ್ಟ ಅರ್ಥಹೀನ ಸಾಮಾಜಿಕ ಕಟ್ಟುಪಾಡುಗಳಿಂದ ಕೂಡಿದ್ದ ಸಂಧರ್ಭದಲ್ಲಿ ಸಾಮಾಜಿಕ ಪಿಡುಗುಗಳ ವಿರುದ್ಧ ವೈಯಕ್ತಿಕವಾಗಿ ಸಮರ ಸಾರಿದ್ದ ಅಗ್ರಗಣ್ಯರು ಎಂಬುದು ಕಾಣುತ್ತದೆ[೧೩].

ಶ್ರೀ ಕುರುಂಜಿ ವೆಂಕಟ್ರಮಣ ಗೌಡ (ಕೆ.ವಿ.ಜಿ.) ಹಲವು ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆಯನ್ನು ಸಲ್ಲಿಸಿದ ಜಿಲ್ಲೆಯ ಮತ್ತೊಬ್ಬ ಮಹಾನ್ ನಾಯಕರು. ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನ, ಶೈಕ್ಷಣಿಕ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಆರೋಗ್ಯ ಕ್ಷೇತ್ರಗಳ ಅಭಿವೃದ್ಧಿಗಾಗಿ ನಿಸ್ವಾರ್ಥ ಮನೋಭಾವದಿಂದ ದುಡಿದಿರುವುದು ಕಂಡು ಬರುತ್ತದೆ.

'ಸುವರ್ಣ ಸ್ಪರ್ಶ ಸ್ವಾತಂತ್ರ್ಯದ ಸ್ವರ್ಣ ಹೆಜ್ಜೆ' ದಕ್ಷಿಣಕನ್ನಡ ಎಂಬ ಡಾ. ಮಹಾಬಲೇಶ್ವರ ರಾವ್ ಬರೆದಿರುವ ಕೃತಿಯಲ್ಲಿ ದಕ್ಷಿಣಕನ್ನಡ ಜಿಲ್ಲೆಯು ಕಂಡಿದ್ದ ಸತ್ಯಾಗ್ರಹಿಗಳ ಬಗೆಗಿನ ವಿವರಗಳು ಸಿಗುತ್ತವೆ. ಅರೆಬೈಲು ಬೋಜರಾವ್, ಎ.ಬಿ.ಶೆಟ್ಟಿ, ಆರ್.ಕೆ. ಪ್ರಭು, ಮೂಲ್ಕಿ ರಾಮಕೃಷ್ಣ ಪೂಂಜ, ಡಾ.ಎನ್.ಆರ್. ಭಟ್, ಖಂಡಿಗೆ ಕೃಷ್ಣ ಭಟ್, ಉಡುಪಿ ಗೋವಿಂದ ರಾಜು, ದೇವಪ್ಪ ಆಳ್ವ, ಡಾ. ಯು.ಪಿ.ಮಲ್ಯ, ಕೆ.ಕೆ. ಶೆಟ್ಟಿ, ದಾಮೋದರ ಬಾಳಿಗಾ, ಸಂಜೀವ ಶೆಣೈ, ಕಮಾಲಾವತಿ ಅಮ್ಮ, ಶಂಭುಶೆಟ್ಟಿ, ರಾಮಯ್ಯ ರೈ ಮೊದಲಾದವರ ಚಟುಟಿಕೆಗಳನ್ನು ಕುರಿತಾದ ಸ್ಥೂಲಮಾಹಿತಿಗಳು ಲಭ್ಯವಿದೆ[೧೪].

ಪೊಲಿ ಕೆನರಾ ೨೦೦೦ ಎಂಬ ಕೃತಿಯಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ನಾಯಕರ ಬಗ್ಗೆ, ಸಹಕಾರ ಚಳುವಳಿಯಲ್ಲಿ ತೊಡಗಿಸಿಕೊಂಡ ನಾಯಕರುಗಳ ಬಗ್ಗೆ, ವಿದ್ಯಾರ್ಥಿ ಚಳುವಳಿಗಳೂ ಹಾಗೂ ಕಾರ್ಮಿಕ ಚಳುವಳಿಗಳಲ್ಲಿ ತೊಡಗಿಸಿಕೊಂಡಿರುವ ನಾಯಕರುಗಳ ಕಿರುಪರಿಚಯ ಸಿಗುತ್ತದೆ[೧೫].

ಈ ಮೇಲಿನ ಪ್ರಮುಖ ಗ್ರಂಥಗಳನ್ನು ಪರಿಶೀಲಿಸಿದಾಗ ಈ ಜಿಲ್ಲೆಗೆ ವಿಶೇಷ ಬದ್ಧತೆಯಿಂದ ದುಡಿದ ಉಳ್ಳಾಲ ಶ್ರೀನಿವಾಸ ಮಲ್ಯರ ನಾಯಕತ್ವ ಹಾಗೂ ಕೊಡುಗೆಗಳನ್ನು ಪ್ರತ್ಯೇಕವಾಗಿ ಹಾಗೂ ಸವಿಸ್ತಾರವಾಗಿ ಗುರುತಿಸಿರುವುದು ಕಂಡು ಬರುವುದಿಲ್ಲ. ಈ ಮೇಲಿನ ಕೃತಿಗಳಲ್ಲಿ ಶ್ರೀನಿವಾಸ್ ಮಲ್ಯರ ಕುರಿತಂತೆ ಚುಟುಕು ಮಾಹಿತಿಗಳು ಮಾತ್ರವೇ ಸಿಗುತ್ತದೆ.

ಯು. ಶ್ರೀನಿವಾಸ ಮಲ್ಯ ಶತಾಬ್ದಿ ಸಂಸ್ಕರಣೆ ಎಂಬ ಕೃತಿಯಲ್ಲಿ ನಾ. ದಾಮೋದರ ಶೆಟ್ಟಿಯವರು ಸಂಗ್ರಹಣೆ ಮಾಡಿದ ಶ್ರೀನಿವಾಸ ಮಲ್ಯರ ಬಗೆಗಿನ ಲೇಖನಗಳು ಸಂಗ್ರಹವಾಗಿದೆಯಾದರೂ ಅವರ ಸಮಗ್ರ ಕೊಡುಗೆಗಳ ಬಗ್ಗೆ, ಶೈಕ್ಷಣಿಕ ಅದ್ಯಯನದ ಪ್ರಯತ್ನಗಳು ನಡೆದಿಲ್ಲವೆನ್ನುವುದು ತೋರುತ್ತದೆ. ಅಂತಹ ಒಬ್ಬ ಧೀಮಂತ ವ್ಯಕ್ತಿಯನ್ನು

ಮರುವಿವೇಚನೆ ಮಾಡುವ, ಮಾದರಿ ವ್ಯಕ್ತಿತ್ವವನ್ನಾಗಿ ಸ್ವೀಕರಿಸುವ ಪ್ರಯತ್ನ ಆಗಬೇಕಾಗಿದೆ. ಪ್ರಸ್ತುತ ಸಂಶೋಧನೆಯು ಇಂತಹ ಪ್ರಯತ್ನವನ್ನು ಕೈಗೊಂಡಿದೆ.

## ೧. ೬. ಅಧ್ಯಯನದ ಉದ್ದೇಶಗಳು

- ದಕ್ಷಿಣ ಕನ್ನಡ ಜಿಲ್ಲೆ ಮತ್ತು ಒಟ್ಟು ಕರ್ನಾಟಕದ ಅಭಿವೃದ್ಧಿಗೆ ಶ್ರೀನಿವಾಸ ಮಲ್ಯರು ಹಾಕಿದ ಭದ್ರ ಅಡಿಪಾಯವನ್ನು ಮರುವಿವೇಚಿಸಿ ಅವರ ನಾಯಕತ್ವದ ದೃಷ್ಟಿಯನ್ನು ತಿಳಿಯುವ ಪ್ರಯತ್ನವನ್ನು ಮಾಡುವುದು.
- ಧೈರ್ಯ, ಉದಾರತೆ ಹಾಗೂ ನಡತೆ, ನೀತಿಯುತವಾದ ಹಾಗೂ ಶಿಸ್ತುಬದ್ಧ ಚಿಂತನೆ ನಡವಳಿಕೆಗಳ ಪ್ರತೀಕವಾದ ಮಲ್ಯರ ವ್ಯಕ್ತಿತ್ವವನ್ನು ಅಧ್ಯಯನ ಮಾಡುವುದು.
- ಜಿಲ್ಲೆಯ ಅಭಿವೃದ್ಧಿಗೆ ಸರ್ಕಾರದಿಂದ ಸಿಗಬಹುದಾದ ಸೌಲಭ್ಯ ಹಾಗೂ ಬೆಂಬಲವನ್ನು ಮಲ್ಯರು ಪಡೆದ ರೀತಿಯನ್ನು ಗುರುತಿಸುವುದು.
- ವೈಯಕ್ತಿಕ ಲಾಭಕ್ಕಾಗಿಯಾಗಲೀ, ಅಥವಾ ಸ್ವಂತ ಸಂಸ್ಥೆಗಳಿಗಾಗಲೀ ದುಡಿಯದೆ ಜೀವನದುದ್ದಕ್ಕೂ ಜನತೆಯ ಕಲ್ಯಾಣಕ್ಕಾಗಿ ದುಡಿದ ಮಲ್ಯರನ್ನು ಇಂದಿನ ಪೀಳಿಗೆಗೆ ‘‘ಮಾದರಿ ನಾಯಕ’’ನೆಂದು ಪರಿಚಯಿಸುವುದು.
- ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಂಡಿದ್ದ ನಂತರ ಅತ್ಯುತ್ತಮ ನಾಯಕರಾಗಿ ರೂಪುಗೊಂಡ ಶ್ರೀನಿವಾಸ ಮಲ್ಯರ ವಿವಿಧ ರಾಜಕೀಯ ಮಜಲುಗಳನ್ನು ವಿಶ್ಲೇಷಣೆ ಮಾಡುವುದು.
- ಶ್ರೀನಿವಾಸ ಮಲ್ಯರ ವಿವಿಧ ಸಾಧನೆಗಳತ್ತ ಪಕ್ಷಿ ನೋಟವನ್ನು ಹರಿಸಿ ಅವರೊಬ್ಬ ದಕ್ಷಿಣ ಕನ್ನಡ ಜಿಲ್ಲೆಯು ಕಂಡ ಅಪರೂಪದ ನಾಯಕನೆಂದು ಸಾಬೀತುಪಡಿಸುವುದು.
- ಶ್ರೀನಿವಾಸ ಮಲ್ಯರ ಹೆಸರನ್ನು ಚಿರಸ್ಥಾಯಿಯಾಗಿಸುವುದು.

## ೧.೭. ಅಧ್ಯಯನದ ಊಹೆ

- ಶ್ರೀನಿವಾಸ ಮಲ್ಯರು ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಜೀವನವನ್ನು ಮುಡಿಪಾಗಿಟ್ಟರು. ಜನರು ಅವರನ್ನು ಬಹಳ ಬೇಗನೆ ಮರೆತಿರುವರು. ಅವರ ಬಗ್ಗೆ ಸಮಗ್ರವಾಗಿ ಸಿಗುವ ದಾಖಲೆಗಳನ್ನು ಒಂದೆಡೆಗೆ ತರುವ ಪ್ರಯತ್ನಗಳಾಗಲಿಲ್ಲ.

- ದೇಶದ ಮಹಾನ್ ನಾಯಕರಾಗಿದ್ದ, ಸಮಾಜ ಸ್ಪಂದನದ ರಾಜಕಾರಿಣಿಯಾಗಿದ್ದ ಶ್ರೀನಿವಾಸ ಮಲ್ಯರ ಆದರ್ಶಗಳು ಇಂದಿನ ಸಮಾಜದಲ್ಲಿ ನಿರ್ಲಕ್ಷಿಸಲ್ಪಟ್ಟಿವೆ. ಅವರ ಖಾಸಗಿ ಬದುಕಿನ ಪರಿಚಯವೂ ಹೆಚ್ಚಿನವರಿಗಿಲ್ಲ ಎನ್ನುವ ಪರಿಕಲ್ಪನೆ.
- ಆ ಕಾಲದ ರಾಜಕೀಯ ಚದುರಂಗದಾಟದಲ್ಲಿ, ಗುರಿಯನ್ನು ತಲುಪಲು ಶ್ರೀನಿವಾಸ ಮಲ್ಯರು ಮಾಡಿದ ಹೋರಾಟಗಳಿಗೆ ಜನಸ್ಪಂದನ ಸಕಾರಾತ್ಮಕವಾಗಿರಲಿಲ್ಲ. ಈ ಮೇಲಿನ ಊಹೆಗಳನ್ನು ಸಂಶೋಧನಾ ಅಧ್ಯಯನದ ಮೂಲಕ ಪರೀಕ್ಷಿಸುವ ಪ್ರಯತ್ನಗಳನ್ನು ಮುಂದಿನ ಅಧ್ಯಾಯಗಳಲ್ಲಿ ಮಾಡಲಾಗುತ್ತದೆ.

### ೧.೮. ಅಧ್ಯಯನದ ವಿಧಾನಗಳು

ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಪ್ರತ್ಯಕ್ಷವಾಗಿ, ಒಟ್ಟು ರಾಷ್ಟ್ರೀಯ ಮಟ್ಟದಲ್ಲಿ ಮಾಡಿದ ಅಭಿವೃದ್ಧಿಗಾಗಿ ಶ್ರೀನಿವಾಸ ಮಲ್ಯರು ಮಾಡಿದ ಕೆಲಸಗಳನ್ನು ದಾಖಲೀಕರಿಸಲು, ಹಾಗೂ ಅವರ ನಾಯಕತ್ವದ ವರ್ಚಸ್ಸನ್ನು ಅರಿತುಕೊಳ್ಳಲು ಈ ಕೆಳಗಿನ ವಿಧಾನಗಳನ್ನು ಪ್ರಸ್ತುತ್ತ ಅಧ್ಯಯನ್ನಕ್ಕೆ ಬಳಸಿಕೊಳ್ಳಲಾಗುವುದು.

- ಶ್ರೀನಿವಾಸ ಮಲ್ಯರ ಕುರಿತಾದ ಲಭ್ಯವಿರುವ ಬರಹ, ಲೇಖನಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದು.
- ಗೋವಿಂದ ಪೈ ಸಂಶೋಧನಾ ಕೇಂದ್ರದಲ್ಲಿ ಸಂಗ್ರಹಿಸಲ್ಪಟ್ಟ ದಾಖಲಿತ ಮಾಹಿತಿಗಳನ್ನು ಸಂಶೋಧನೆ ಮಾಡುವುದು.
- ಮಲ್ಯರ ಕುಟುಂಬ ಹಾಗು ಬಂಧು ವರ್ಗದವರನ್ನು ಮುಖತಃ ಭೇಟಿ ಮಾಡಿ ಮಾಹಿತಿ ಹಾಗೂ ಅಭಿಪ್ರಾಯಗಳನ್ನು ಸಂಗ್ರಹಿಸುವುದು.
- ಶ್ರೀನಿವಾಸ ಮಲ್ಯ ಜನ್ಮಶತಮಾನೋತ್ಸವ ಸಮಿತಿಯ ಸದಸ್ಯರನ್ನು ಸಂಪರ್ಕಿಸಿ, ಮಲ್ಯರ ಒಡನಾಡಿಗಳ, ಸ್ನೇಹಿತರ ಅಭಿಪ್ರಾಯವನ್ನು ಚರ್ಚಿಸುವುದು.
- ಕ್ಷೇತ್ರಗಳಿಗೆ ಭೇಟಿನೀಡಿ ಭಾವ ಚಿತ್ರ ಸಂಗ್ರಹಣೆ ಮತ್ತು ಇನ್ನಿತರ ಮಾಹಿತಿಗಳನ್ನು ಪಡೆಯುವ ಪ್ರಯತ್ನ ಮಾಡುವುದು.

ಈ ಮೇಲಿನ ವಿಧಾನಗಳನ್ನು ಅಳವಡಿಸಿಕೊಂಡು ಮಲ್ಯರ ಬದುಕು ಸಾಧನೆ ಹಾಗೂ ಕೊಡುಗೆಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಅಧ್ಯಯನದದುದ್ದಕ್ಕೂ ಮಾಡಲಾಗತ್ತದೆ.

## ೧.೯. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಸಂಶೋಧನಾ ಅಧ್ಯಯನವು ಮಲ್ಯರ ವಿಸ್ತೃತವಾದ ಕೊಡುಗೆಗಳನ್ನು ನಾಯಕತ್ವದ ಮಜಲುಗಳನ್ನು ದಾಖಲಿಸುವ ಪ್ರಯತ್ನವಾಗಿದೆ. ವ್ಯಕ್ತಿ ಪರಿಚಯದ ಮೂಲಕ ಸಾಗುವ ಈ ಅಧ್ಯಯನವು ಮಲ್ಯರ ರಾಜಕೀಯ ಜೀವನ, ಆರ್ಥಿಕಾಭಿವೃದ್ಧಿಗೆ ನೀಡಿದ ಕೊಡುಗೆ, ಅವರ ವ್ಯಕ್ತಿತ್ವದಲ್ಲಿದ್ದ ದೂರ ದರ್ಶಿತ್ವ, ದಕ್ಷಿಣಕನ್ನಡ ನವನಿರ್ಮಾಣಕ್ಕಾಗಿ ಅವರು ಕೈಗೊಂಡ ಪ್ರಯತ್ನ, ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಳ್ಳುವಿಕೆ, ಶೈಕ್ಷಣಿಕ ಕ್ಷೇತ್ರದ ಕೊಡುಗೆ, ಕೈಗಾರಿಕೀಕರಣಕ್ಕಾಗಿ ಮಾಡಿದ ಹೋರಾಟ, ಹಾಗೂ ಕ್ರಿಯಾಶೀಲತೆಯನ್ನು ಸಂಕ್ಷೇಪ್ತವಾಗಿ ವಿವರಿಸುವ ಯೋಜನೆಯೊಂದನ್ನು ರೂಪಿಸಿಕೊಳ್ಳಲಾಗಿದೆ. ಜೊತೆಗೆ ಮಣಪಾಲದ ಶಿಲ್ಪಿಯಾದ ಡಾ। ಟಿ. ಎಂ, ಎ ಪೈಯವರೊಂದಿಗೆ ಮಲ್ಯರ ಸಾಧನೆಗಳನ್ನು ತುಲನಾತ್ಮಕವಾಗಿ ಪರಿಶೀಲಿಸಲಾಗುತ್ತದೆ.

## ೧.೧೦. ಅಧ್ಯಯನದ ಇತಿಮಿತಿಗಳು

ಮಲ್ಯರು ಹುಟ್ಟುಹಾಕಿದ ಪ್ರತಿ ಸಂಸ್ಥೆಯೂ ಉತ್ತರೋತ್ತರ ಪ್ರಗತಿಯನ್ನು ಕಾಣುತ್ತಲೇ ಸಾಗುತ್ತಿದೆಯಾದರೂ ಆ ಕುರಿತಂತೆ ಪೂರಕವಾದ ಪ್ರತಿಕ್ರಿಯೆಗಳು ಪೂರ್ಣವಾಗಿ ಸಿಗುತ್ತದೆಯೇ ಎನ್ನುವುದು ಪ್ರಶ್ನಾತೀತವಾಗಿದೆ. ರಾಷ್ಟ್ರೀಯ ಮಟ್ಟದಲ್ಲಿ ಅವರು ಮಾಡಿದ ಕೆಲಸಗಳ ಮಹತ್ವವನ್ನು ಹೇಳಬೇಕಾದ, ದಾಖಲಿಸಬೇಕಾದ ಆಯಾ ಪ್ರವೇಶದ ಜನರು ಅದನ್ನು ಮರೆತು ಕೂತಿದ್ದ ಕಾರಣ ಆ ಬಗ್ಗೆ ಇತಿಹಾಸದ ಪುಟಗಳಲ್ಲಿ ಸುಳಿವು ಸಿಗದೇ ಇರುವುದರಿಂದ ಶ್ರೀನಿವಾಸ ಮಲ್ಯರ ರಾಷ್ಟ್ರೀಯ ವರ್ಚಸ್ಸಿನ ಬಗ್ಗೆ ವಿಶ್ಲೇಷಿಸುವ ಪ್ರಯತ್ನವಾಗದೇ ಕೇವಲ ದಕ್ಷಿಣ ಕನ್ನಡ ಜಿಲ್ಲೆಗೆ ಅವರ ಕೊಡುಗೆಗಳನ್ನು ಮಾತ್ರವೇ ಈ ಅಧ್ಯಯನದಲ್ಲಿ ಸೀಮಿತಗೊಳಿಸಲಾಗಿದೆ.

## ೧.೧೧. ಅಧ್ಯಾಯಗಳ ಚೌಕಟ್ಟುಗಳು

ಪ್ರಸ್ತುತ ಸಂಶೋಧನೆಯಲ್ಲಿ ಒಟ್ಟು ೬ ಅಧ್ಯಾಯಗಳನ್ನು ಯೋಜಿಸಲಾಗಿದೆ. ಮೊದಲ ಅಧ್ಯಾಯವು ಅಭಿವೃದ್ಧಿ ಕುರಿತಾದ ಪ್ರವೇಶಿಕೆಯನ್ನು ಹೊಂದಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಪೂರ್ವದ ಚಿತ್ರಣ ನಂತರದ ಬೆಳವಣಿಗೆಗಳ ಸ್ಥೂಲನೋಟ, ಅಭಿವೃದ್ಧಿಯಲ್ಲಿ ನಾಯಕತ್ವದ ಪಾತ್ರ ಅಧ್ಯಯನದ ಉದ್ದೇಶ, ಊಹೆ, ವಿಧಾನಗಳು ವ್ಯಾಪ್ತಿ ಮತ್ತು ಇತಿಮಿತಿಗಳ ಪರಿಚಯವನ್ನು ನೀಡುತ್ತದೆ.

**ಅಧ್ಯಾಯ ೨ ರಲ್ಲಿ** ಶ್ರೀನಿವಾಸ ಮಲ್ಯರ ಕೌಟುಂಬಿಕ ಹಿನ್ನಲೆ, ಬಾಲ್ಯ, ಶಿಕ್ಷಣ ಮತ್ತು ವೈವಾಹಿಕ ಬದುಕಿನ ನೋಟಗಳನ್ನು ಸವಿಸ್ತಾರವಾಗಿ ತಿಳಿದುಕೊಳ್ಳುವ ಪ್ರಯತ್ನಗಳನ್ನು ಮಾಡಲಾಗುತ್ತದೆ.

**ಅಧ್ಯಾಯ ೩ ರಲ್ಲಿ** ಮಲ್ಯರ ಸ್ವಾತಂತ್ರ್ಯ ಚಳವಳಿ ಹೋರಾಟ, ದೇಶಭಕ್ತಿ, ರಾಜಕೀಯ ಮುತ್ಸದಿತನ, ರಾಜಕೀಯ ಸವಾಲು ಮುಂತಾದವುಗಳ ವಿಶ್ಲೇಷಣೆಯನ್ನು ನೀಡಲು ಪ್ರಯತ್ನಗಳನ್ನು ನಡೆಸಲಾಗಿದೆ.

**ಅಧ್ಯಾಯ ೪ ರಲ್ಲಿ** ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಗೆ ಮಲ್ಯರು ತೋರಿದ ಆಸಕ್ತಿ, ಮಾನವತಾವಾದ ಅವರ ಭವಿಷ್ಯದ ಕನಸುಗಳ ಮೇಲೆ ಪಕ್ಷಿನೋಟವನ್ನು ಹರಿಸಿ ಅವರ ಕಾರ್ಯಕ್ಷೇತ್ರಗಳೆಲ್ಲವನ್ನೂ ಗುರುತಿಸಿ ದಾಖಲಿಸಲಾಗಿದೆ.

**ಅಧ್ಯಾಯ ೫ ರಲ್ಲಿ** ಮಣಿಪಾಲದ ಶಿಲ್ಪಿಯಾಗಿ ಹೆಸರು ಪಡೆದ ಡಾ। ಟಿ ಎಂ ಎ ಪೈಯವರ ಸಾಧನೆಗಳೊಂದಿಎ ಶ್ರೀನಿವಾಸ ಮಲ್ಯರ ಸಾಧನೆಗಳನ್ನು ತುಲನೆ ಮಡಿ ಮಲ್ಯರು ಜನಮನದಿಂದ ಪ್ರಸ್ತುತ ಕಾಲಘಟ್ಟದಲ್ಲಿ ದೂರವುಳಿಯಲು ಕಾರಣಗಳನ್ನು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ. ಅದಕ್ಕಾಗಿ ಮಲ್ಯರ ಬಗ್ಗೆ ತಿಳಿದಿದ್ದ ಆಯ್ದ ವ್ಯಕ್ತಿಗಳ ಸಂದರ್ಶನವನ್ನು ಮಾಡಿ ಅಭಿಪ್ರಾಯ ಸಂಗ್ರಹಣೆ ಮಾಡಲಾಗಿದೆ.

**ಕೊನೆಯ ಅಧ್ಯಾಯವು** ಅಧ್ಯಯನದ ಫಲಶ್ರುತಿಯನ್ನು ದಾಖಲಿಸಿದೆ.

ಒಟ್ಟಿನಲ್ಲಿ ಈ ಸಂಶೋಧನಾ ಅಧ್ಯಯನವು ದಕ್ಷಿಣ ಕನ್ನಡ ಜಿಲ್ಲೆಯ ಅವತಾರ ಪುರುಷನಾಗಿ, ಸಾಧನೆಯ ಶಿಲ್ಪಿಯಾಗಿ ರೂಪುಗೊಂಡ ಉಳ್ಳಾಲ ಶ್ರೀನಿವಾಸ ಮಲ್ಯರ ವ್ಯಕ್ತಿತ್ವ, ದೇಶಪ್ರೇಮ, ದೂರದೃಷ್ಟಿ, ಪರಿಶ್ರಮ ಹಾಗೂ ಸವಾಲುಗಳನ್ನು ಎದುರಿಸಿದ ರೀತಿಗಳನ್ನು ಸಮಗ್ರವಾಗಿ ಪರಿಶೀಲಿಸಿಕೊಂಡು ಅವರನ್ನು ಕರ್ತೃತ್ವಶಾಲೀ ವ್ಯಕ್ತಿ ಎಂದು ಸಾಬೀತುಪಡಿಸುವುದೇ ಸಂಶೋಧನೆಯ ಉದ್ದೇಶವಾಗಿದೆ.

## ಪರಾಮರ್ಶನ ಗ್ರಂಥಗಳ ವಿವರಗಳು


೧. ಡಾ. ಬಿ. ಪ್ರಭಾಕರ ಶಿಶಿಲ; 'ಅಭಿವೃದ್ಧಿಯ ಅರ್ಥಶಾಸ್ತ್ರ' ಮಂಗಳ ಪ್ರಕಾಶನ, ಮಂಗಳೂರು, ೨೦೦೨ ಪುಟ–೫.

೨. ಅದೇ, ಪುಟ–೩.

೩. ಅದೇ, ಪುಟ–೩,೪.

೪. ಒಡೆಯರ್ ಡಿ. ಹೆಗ್ಗಡೆ, ಎನ್, ಅನ್ನ ಪೂರ್ಣೇಶ್ವರಿ; 'ಭಾರತದ ಆರ್ಥಿಕಾಭಿವೃದ್ಧಿ', ಅರ್ಜುನ್ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೪, ಪುಟ–೫.

೫. ಡಾ. ಮುಕುಂದ ಪ್ರಭು, 'ಪೊಲಿ–ಕೆನರಾ ೨೦೦೦', ಪ್ರಕಾಶಕರು, ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ, ಮಂಗಳೂರು–೨೦೦೦, ಪುಟ–೭೮.

೬. ಅದೇ, ಪುಟ–೮೦.

೭. ಅದೇ, ಪುಟ–೮೨, ೮೪.

೮. ಹಾರೋಗದ್ದೆ ಉಷಾ ರಮೇಶನಾಯಕ; 'ದಕ್ಷಿಣ ಕನ್ನಡ ಜಿಲ್ಲೆಯ ಶತಮಾನದ ಮಹಾನ್ ಪ್ರತಿಭೆಗಳು', ಭೂಮಿಕ ಪ್ರಕಾಶನ, ೨೦೦೫, ಪುಟ–೧೮೪.

೯. ಡಾ. ಬಿ. ಪಟ್ಟಾಭಿರಾಮ್; 'ಲೀಡರ್‌ಷಿಪ್' ವಾಸನ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೮, ಪುಟ–೮೪.

೧೦. ಹಾರೋಗದ್ದೆ ಉಷಾ ರಮೇಶ ನಾಯಕ; 'ದಕ್ಷಿಣ ಕನ್ನಡ ಜಿಲ್ಲೆಯ ಶತಮಾನದ ಮಹಾನ್ ಪ್ರತಿಭೆಗಳು', ಭೂಮಿಕ ಪ್ರಕಾಶನ ೨೦೦೫, ಪುಟ–೧೮೯.

೧೧. ಅದೇ, ಪುಟ–೧೮೯.

೧೨. ಅದೇ, ಪುಟ–೨೩೯,೨೩೭.

೧೩. ಹಾರೋಗದ್ದೆ ಉಷಾ ರಮೇಶ ನಾಯಕ; 'ದಕ್ಷಿಣ ಕನ್ನಡ ಜಿಲ್ಲೆಯ ಶತಮಾನದ ಮಹಾನ್ ಪ್ರತಿಭೆಗಳು', ಭೂಮಿಕ ಪ್ರಕಾಶನ ೨೦೦೫, ಪುಟ–೧೪೧, ೧೪೨.

೧೪. ಡಾ. ಮಹಾಬಲೇಶ್ವರ ರಾವ್; 'ಸ್ವಾತಂತ್ರ್ಯದ ಸ್ವರ್ಣ ಹೆಜ್ಜೆ, ದಕ್ಷಿಣ ಕನ್ನಡ', ಪುಟ–೮೭೨, ೯೫೪.

೧೫. ಡಾ. ಮುಕುಂದ ಪ್ರಭು; 'ಪೊಲಿ–ಕೆನರಾ ೨೦೦೦', ಜಿಲ್ಲಾಧಿಕಾರಿ, ದ.ಕ., ಮಂಗಳೂರು, ೨೦೦೦, ಪುಟ೭೩, ೭೪.

# ಅಧ್ಯಾಯ – ೨

## ಶ್ರೀನಿವಾಸ ಮಲ್ಯರ ಕೌಟುಂಬಿಕ ಹಿನ್ನಲೆ, ಬಾಲ್ಯ, ಶಿಕ್ಷಣ ಮತ್ತು ವೈವಾಹಿಕ ಜೀವನ

## ಅಧ್ಯಾಯ – ೨

# ಶ್ರೀನಿವಾಸ ಮಲ್ಯರ ಕೌಟುಂಬಿಕ ಹಿನ್ನಲೆ, ಬಾಲ್ಯ, ಶಿಕ್ಷಣ ಮತ್ತು ವೈವಾಹಿಕ ಜೀವನ

### ೨.೧. ಶ್ರೀನಿವಾಸ ಮಲ್ಯರ ಕೌಟುಂಬಿಕ ಹಿನ್ನಲೆ

ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ''ಕುಟುಂಬವು'' ಮಹತ್ತರ ಪಾತ್ರವನ್ನು ವಹಿಸುತ್ತದೆ. ಮಾನವನ ಸಮೂಹ ಜೀವನಕ್ಕೆ ಕುಟುಂಬವು ಅಡಿಪಾಯವಾಗಿದೆ. ಸಮಾಜಶಾಸ್ತ್ರೀಯ ಪ್ರಾಮುಖ್ಯತೆಯ ದೃಷ್ಠಿಯಿಂದ ಕುಟುಂಬವನ್ನು ವಿಶ್ಲೇಷಿಸಿದರೆ ಬೇರೆಯಾವುದೇ ಸಂಘ ಸಂಸ್ಥೆಗಳು ಕುಟುಂಬವನ್ನು ಮೀರಿಸಲಾರದೆಂದು ಚಿಂತಕರಾದ ಮೆಕೈವರ್ ಮತ್ತು ಪೇಜ್ ಅಭಿಪ್ರಾಯ ಪಡುತ್ತಾರೆ[೧].

ಕುಟುಂಬವು ವ್ಯಕ್ತಿ ಮತ್ತು ಸಮಾಜವನ್ನು ರೂಪಿಸುತ್ತದೆ. ವ್ಯಕ್ತಿಯ ಹಲವು ಮೂಲಭೂತ ಅವಶ್ಯಕತೆಗಳು ಕುಟುಂಬದಲ್ಲಿ ಈಡೇರಿಸ್ಪಡುತ್ತದೆ. ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಗೆ, ಆತನ ದೋಷಗಳ ನಿವಾರಣೆಗೆ ಮತ್ತು ದೈಹಿಕ ಮಾನಸಿಕ ಸುಧಾರಣೆಗಳಿಗೆ ಕುಟುಂಬವು ಅಗತ್ಯವಾಗಿದೆ ಎನ್ನುವುದು ಈ ದೇಶದ ಪಾರಂಪರಿಕ ಚಿಂತನೆಗಳಲ್ಲಿ ಒಂದಾಗಿದೆ.

ಮಗುವಿನ ಸಾಮಾಜೀಕರಣವು ಆರಂಭವಾಗುವುದೇ ಕುಟುಂಬದಲ್ಲಿ. ಹೆತ್ತವರು ಮತ್ತು ಕುಟುಂಬದ ಇನ್ನಿತ್ತರ ಸದಸ್ಯರು, ಪದ್ಧತಿ ಸಂಪ್ರದಾಯಗಳು, ಭಾಷೆ, ಸಂಸ್ಕ್ರತಿ, ಆಚಾರ ವಿಚಾರಗಳು, ಜೀವನ ಮೌಲ್ಯ ದರ್ಶನಗಳನ್ನು ಪರಿಚಯಿಸುವುದರ ಮೂಲಕ ಸಾಮಾಜೀಕರಣ ಪ್ರಕ್ರಿಯೆಗಳು ಆರಂಭಗೊಳ್ಳುತ್ತದೆ. ಹಿರಿಯರು ಮಗುವಿನೊಡನೆ ವರ್ತಿಸುವ ರೀತಿ, ಸರ್ವತೋಮುಖ ಬೆಳವಣಿಗೆಗೆ ನೀಡುವ ದೈಹಿಕ, ಮಾನಸಿಕ, ನೈತಿಕ ಹಾಗೂ ಭಾವನಾತ್ಮಕ ಪ್ರಭಾವಗಳು ಮಹತ್ವದ ಪಾತ್ರವನ್ನು ವಹಿಸುತ್ತದೆ. ಉತ್ತಮ ಕುಟುಂಬದಲ್ಲಿ ಜನಿಸಿದ ಮಗುವು ತನಗೂ ಸಮಾಜಕ್ಕೂ ಒಳಿತಾಗಿರುವಂತೆ ಜೀವಿಸುತ್ತಾನೆ.

ನಾಯಕತ್ವದ ಪಾತ್ರದಲ್ಲಿ ವ್ಯಕ್ತಿತ್ವವನ್ನು ವಿಶ್ಲೇಷಿಸುವಾಗ ಅನುವಂಶೀಯ ಗುಣಗಳು, ವ್ಯವಹಾರ ಚಾತುರ್ಯಗಳು, ಯೋಜನೆಯ ರಚನೆಗಳು, ಸಂಪರ್ಕ ಹಾಗೂ ಆಂತರಿಕ ಭಾಂದವ್ಯಗಳು, ನಿರ್ದೇಶನ, ಮೇಲ್‌ಉಸ್ತುವಾರಿ, ಪ್ರೇರಣೆ ಇತ್ಯಾದಿಗಳು ವ್ಯಕ್ತಿತ್ವದ ಹಲವು ಆಯಾಮಗಳಾಗಿ ರೂಪುಗೊಳ್ಳುತ್ತದೆ. ಮನಸ್ಸಿನಲ್ಲಿ ಸ್ಥಿರತೆಯನ್ನು, ಏಕತೆಯನ್ನು, ಇತರರಿಗೆ ಗೌರವವನ್ನು ಕೊಡುವಂತಹ ರೀತಿ ನೀತಿಗಳನ್ನು ಕುಟುಂಬವು ಆರಂಭಿಕ ಹಂತದಲ್ಲಿ ಕಲಿಸಬೇಕಾಗಿದೆ. ನಾಯಕತ್ವದ ಬುನಾದಿ ಮೊದಲಿಗೆ ಮನೆಯೇ ಆಗಿದೆ. ನಾಯಕನಿಗಿರಬೇಕಾದ ಉತ್ತಮ ನಡುವಳಿಕೆ ವಿನಯಶೀಲತೆ, ಸಂದರ್ಭಕ್ಕೆ ಅನುಗುಣವಾಗಿ ಹೊಂದಿಕೊಳ್ಳುವಿಕೆ, ಚಿತ್ತಶುದ್ಧಿಯಿಂದ ಕೆಲಸ ನಿರ್ವಹಿಸುವಿಕೆ ಹಾಗೂ ಗೌರವ ಕಾಪಾಡುವಿಕೆ ಈ ಎಲ್ಲಾ ಗುಣಗಳಿಗೆ ಕುಟುಂಬವೇ ಮೊದಲ ಅಡಿಪಾಯವಾಗಿರುತ್ತದೆ ಎನ್ನುವುದು

ಪಟ್ಟಾಭಿರಾಮನ್‌ರವರ ಅಭಿಪ್ರಾಯವಾಗಿದೆ[೨]. ನಾಯಕತ್ವಕ್ಕೆ ಇರಬೇಕಾದ ಈ ಮೇಲಿನ ವಿವರಗಳನ್ನು ಗಮನಿಸುವಾಗ ಉಳ್ಳಾಲ ಶ್ರೀನಿವಾಸ ಮಲ್ಯರ ವ್ಯಕ್ತಿತ್ವ ವಿಕಾಸಕ್ಕೆ ಬಹಳಷ್ಟು ಪೂರಕವಾದ ಕೌಟುಂಬಿಕ ವಾತಾವರಣವಿದ್ದುದ್ದು ಕಂಡುಬರುತ್ತದೆ. ಶ್ರೀನಿವಾಸ ಮಲ್ಯರ ಕುಟುಂಬವು ಗೌಡಸಾರಸ್ವತ ಸಮುದಾಯದ ಒಂದು ಸಾಂಪ್ರದಾಯಿಕ ಕುಟುಂಬವೆನ್ನುವುದು. ಅವರ ವಂಶಚರಿತ್ರೆಯನ್ನು ವಿಶ್ಲೇಷಿಸುವಾಗ ಕಂಡುಬರುತ್ತದೆ. ಆ ಕುಟುಂಬದ ಹಿರಿಯರು ಧರ್ಮಪಾಲನೆ, ಪರೋಪಕಾರ, ಶ್ರದ್ಧಾ ಭಕ್ತಿಗಳು, ಹಿರಿಯರ ಸೇವೆ, ಬಂಧು ಮಿತ್ರರ ಆತಿಥ್ಯ ಪ್ರತಿಯೋರ್ವರಿಗೂ ತೋರುವ ವಿನಯಪೂರ್ವಕ ನಡವಳಿಕೆ, ವ್ಯಾಪಾರ ಚಾತುರ್ಯ ಮುಂತಾದ ಪಾರಂಪರಿಕ ಮೌಲ್ಯಗಳನ್ನು ಅಳವಡಿಸಿಕೊಂಡಿರುವುದು ಕಾಣುತ್ತದೆ ಮತ್ತು ಮಲ್ಯರ ವ್ಯಕ್ತಿತ್ವದಲ್ಲಿ ಈ ಮೌಲ್ಯಗಳು ಅಭಿವ್ಯಕ್ತಿಯನ್ನು ಪಡೆದಿವೆ. ಸನಾತನ ಮೌಲ್ಯಗಳ ಜೊತೆಗೆ ಈ ಕುಟುಂಬದ ಇನ್ನೊಂದು ವೈಶಿಷ್ಟ್ಯವೆಂದರೆ ದೇಶಭಕ್ತಿ, ಹಿಂಸೆ ಮತ್ತು ಅಹಂಕಾರಗಳು ಈ ಕುಟುಂಬದಿಂದ ಬಹಳ ದೂರವಿರುವುದು ಕಾಣುತ್ತದೆ. ಈ ಸಾತ್ವಿಕತೆಯೇ ಶ್ರೀನಿವಾಸ ಮಲ್ಯರ ಆದರ್ಶಯುತವಾದ ಬದುಕಿಗೆ ನಾಂದಿಯಾಗಿದೆ ಎನ್ನುವುದನ್ನು ಗಮನಿಸಬೇಕು.

ಶ್ರೀನಿವಾಸ ಮಲ್ಯರ ತಂದೆ ತಾಯಿಯರು ತಮ್ಮ ಮಕ್ಕಳಿಗೆ ಪ್ರಜ್ಞಾವಂತಿಕೆಯಿಂದ ಉತ್ತಮ ನಡವಳಿಕೆಗಳನ್ನು ಕಲಿಸಿರುವುದು ಕಾಣುತ್ತದೆ. ಆ ಕುಟುಂಬಕ್ಕೆ ಬಂದ ಸ್ತ್ರೀಯರು ನಯವಿನಯಗಳ ಹಾಗೂ ಸದಾಚಾರ ವರ್ತನೆಯನ್ನು ಅಳವಡಿಸಿಕೊಂಡವರಾಗಿದ್ದರು. ಹಿರಿಯರಿಗೆ ಗೌರವ, ದೇವರಲ್ಲಿ ಭಕ್ತಿ ಮತ್ತು ಕೌಟುಂಬಿಕ ಭಾಂದವ್ಯಗಳನ್ನು ಉಳಿಸಿಕೊಳ್ಳುವ ನೈಪುಣ್ಯತೆಗಳನ್ನು ಅರಿತಿದ್ದರು ಎಂದು ಸಂಶೋಧನಾ ಅಧ್ಯಯನಕ್ಕಾಗಿ ಮಾಹಿತಿ ಸಂಗ್ರಹಣೆ ಮಾಡುವಾಗ, ಸಂದರ್ಶನವನ್ನು ಮಾಡಿದ ಜನಾರ್ದನ ಪ್ರಭುಗಳು
ಅಭಿಪ್ರಾಯ ಪಡುತ್ತಾರೆ[೩].



### ೨.೨. ಶ್ರೀನಿವಾಸ ಮಲ್ಯರ ಬಾಲ್ಯ

ಸಂಪ್ರದಾಯ ಬದ್ಧ ವ್ಯಾಪಾರಿ ಕುಟುಂಬದಲ್ಲಿ ೧೯೦೨ ನವೆಂಬರ ೨೧ ರಂದು ಅವರ ಜನನವಾಗಿರುವುದು ಕಾಣುತ್ತದೆ. ತಂದೆ ಉಳ್ಳಾಲ ಮಂಜುನಾಥ ಮಲ್ಯ ಮತ್ತು ತಾಯಿ ಸರಸ್ವತಿ. ಹಿರಿಯ ಅಣ್ಣ ಮಾಧವ ಮಲ್ಯರು ಹೆಸರಾಂತ ಸಾಮಾಜಿಕ ಮುಂದಾಳುವಾಗಿಯೇ ಬೆಳೆದವರು. ಮತ್ತು ಇವರ ಸಾಧನೆಯ ಪ್ರತೀಕವಾಗಿ ಮಂಗಳೂರಿನ ರಥಬೀದಿಯ ಒಂದು ರಸ್ತೆಗೆ ಇಟ್ಟಿರುವ ಹೆಸರೇ ಸಾಕ್ಷಿಯಾಗಿದೆ.

### ೨.೩. ಶ್ರೀನಿವಾಸ ಮಲ್ಯರ ಶಿಕ್ಷಣ

ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಶಿಕ್ಷಣವು ಕುಟುಂಬದಷ್ಟೇ ಪ್ರಮುಖ ಪಾತ್ರವನ್ನು ವಹಿಸಿದೆ. ಶಿಕ್ಷಣವೆನ್ನುವುದು ಆಧುನಿಕ ಮಾನವನ ಅನಿವಾರ್ಯತೆ ಮತ್ತು ಅವಶ್ಯಕತೆಯೂ ಹೌದು. ವ್ಯಕ್ತಿಯೊಬ್ಬನು ನಾಗರೀಕನಾಗಿ ಬೆಳೆಯಲು, ಅಂತೆಯೇ ನಾಗರೀಕ ಸಮಾಜವನ್ನು ಸೃಷ್ಟಿಸಲು ಶಿಕ್ಷಣವು ಅಗತ್ಯ. ಶಿಕ್ಷಣವೆನ್ನುವುದು ಜ್ಞಾನ ಸಂಗ್ರಹಣೆಯ ಪ್ರಕ್ರಿಯೆ. ಶಿಕ್ಷಣವೆನ್ನುವುದು ವ್ಯಕ್ತಿಯಲ್ಲಿರುವ ಪೂರ್ವಗ್ರಹಗಳನ್ನು ನಿವಾರಣೆ ಮಾಡುವ ಬಹುದೊಡ್ಡ ಸಾಧನೆಯೆಂದು ಮಾರ್ಟಿನ್ ಹೆಚ್ ಎಂಬವರು ಅಭಿಪ್ರಾಯ ಪಡುತ್ತಾರೆ[೪].

ಶಿಕ್ಷಣವು ವ್ಯಕ್ತಿಯಲ್ಲಿ ಆತ್ಮವಿಶ್ವಾಸವನ್ನು, ವಿಶಾಲದೃಷ್ಟಿಯನ್ನು ಸಾಮರ್ಥ್ಯವನ್ನು ಬೆಳೆಸುತ್ತದೆ. ಈ ಹಿನ್ನಲೆಯಿಂದ ಶ್ರೀನಿವಾಸ ಮಲ್ಯರ ವ್ಯಕ್ತಿತ್ವದ ಸಂವರ್ಧನೆ ಶಿಕ್ಷಣವು ಎಷ್ಟರ ಮಟ್ಟಿಗೆ ಕೊಡುಗೆಯಾಗಿದೆ ಎನ್ನುವುದನ್ನು ವಿಶ್ಲೇಷಣೆಗಾಗಿ ಎತ್ತಿಕೊಳ್ಳಲಾಗಿದೆ.

ಮಂಗಳೂರಿನಲ್ಲಿ ಸಂತ ಎಲೋಶಿಯಸ್ ಶೈಕ್ಷಣಿಕ ಸಂಸ್ಥೆಗಳು ಬಹಳಷ್ಟು ಜನಮನ್ನಣೆಯನ್ನು ಪಡೆದಿದೆ ಮತ್ತು ಈ ಸಂಸ್ಥೆಗಳು ಶಿಸ್ತುಬದ್ಧ ಕಲಿಕೆಗೆ ಆದ್ಯತೆಯನ್ನು ನೀಡಿದೆ. ಶ್ರೀನಿವಾಸ ಮಲ್ಯರ ಪ್ರಾಥಮಿಕ ಶಿಕ್ಷಣವು ಸಂತ ಎಲೋಶಿಯಸ್ ಪ್ರಾಥಮಿಕ ಶಾಲೆಯಲ್ಲಿ ನಡೆದಿತ್ತು. ಇದು ಅವರಿಗೆ ಶೈಕ್ಷಣಿಕ ಅಡಿಪಾಯವನ್ನು ಒದಗಿಸಿತ್ತು. ಮುಂದಿನ ವಿದ್ಯಾಭ್ಯಾಸವು ಕೆನರಾ ಹೈಸ್ಕೂಲಿನಲ್ಲಿ ಪೂರೈಸಿರುವುದು ಕಂಡುಬರುತ್ತದೆ. ಉನ್ನತ ಶಿಕ್ಷಣವನ್ನು ಆಗಿನ ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಇಂಟರ್‌ಮಿಡಿಯೇಟ್ ಪದವಿಗಾಗಿ ಮಲ್ಯರು ಸೇರಿಕೊಂಡಿರುವುದು ಕಂಡುಬರುತ್ತದೆ. ಮಲ್ಯರ ಶೈಕ್ಷಣಿಕ ಸಾಧನೆಗಳ ಹುಡುಕಾಟವನ್ನು ಮಾಡಿದಾಗ ಇಂಟರ್ ಮಿಡಿಯೆಟ್ ಪದವಿಗಿಂತಲೂ ಉನ್ನತ ಪದವಿಗಳನ್ನು ಪಡೆದಿರುವುದು ಕಂಡುಬರುವುದಿಲ್ಲ. ಆ ಕಾಲ ಘಟ್ಟದಲ್ಲಿ ಸ್ವಾತಂತ್ರ್ಯ ಚಳುವಳಿಯ ಅಲೆಗಳು ಯುವಜನರನ್ನು ಆವರಿಸಿರುವುದು ಕಾಣುತ್ತದೆ. ಮಲ್ಯರು ಇದಕ್ಕೆ ಹೊರತಲ್ಲ. ಸಾಂಪ್ರದಾಯಿಕ ಶಿಕ್ಷಣಕ್ಕಿಂತಲೂ ಹೆಚ್ಚಾಗಿ ಸ್ವಾತಂತ್ರ್ಯ ಚಳವಳಿಯತ್ತ ಅವರ ಯುವ ಮನಸ್ಸು ಆಕರ್ಷಿಸಿಕೊಂಡಿರುವುದು ಶೈಕ್ಷಣಿಕ ಪ್ರಗತಿಗಳಿಗೆ ಅಡ್ಡಿಯನ್ನುಂಟು ಮಾಡಿರುವುದು ಕಾಣುತ್ತದೆ. ಗಾಂಧೀಜಿಯವರು ೧೯೨೦ರಲ್ಲಿ ಮಂಗಳೂರಿಗೆ ಬಂದಾಗ ಇಲ್ಲಿಯ ಜನತೆಯ ಮುಂದೆ ಸ್ವಾತಂತ್ರ್ಯ ಚಳುವಳಿಯಲ್ಲಿ ಜನತೆ ವಹಿಸಬೇಕಾದ ಪಾತ್ರ, ಅಹಿಂಸಾತ್ಮಕ ಹೋರಾಟಗಳು

ಹರಿಜನೋದ್ಧಾರ, ಖಾದಿ ಚರಕಗಳ ಬಗ್ಗೆ ನೀಡಿದ ಸಂದೇಶಗಳಿಂದ ಶ್ರೀನಿವಾಸ ಮಲ್ಯರು ಬಹಳಷ್ಟು ಪ್ರಭಾವಿತರಾಗಿದ್ದರು ಮತ್ತು ೧೮ನೇ ವಯಸ್ಸಿನಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಸ್ವಯಂ ಸೇವಕರಾಗಿ ಸೇರಿಕೊಳ್ಳುವ ನಿರ್ಧಾರವನ್ನು ಮಾಡಿದ ಕಾರಣ ಅವರು ಶಿಕ್ಷಣವನ್ನುಗೊನೆಗೊಳಿಸಿದರು ಎನ್ನುವುದು ಅವರ ವಂಶಚರಿತ್ರೆಯಿಂದ ತಿಳಿದು ಬರುತ್ತದೆ[೫].

## ೨.೪. ವೈವಾಹಿಕ ಬದುಕಿನ ನೋಟಗಳು

ಸಾಂಪ್ರದಾಯಿಕ ಕುಟುಂಬಗಳಲ್ಲಿ ವಿವಾಹಕ್ಕೆ ವಿಶೇಷ ಪ್ರಾಶಸ್ತ್ಯವಿದೆ. ಗೌಡಸಾರಸ್ವತ ಕುಟುಂಬವು ವಿವಾಹಕ್ಕೆ ಸಂಬಂಧಿಸಿದ ಹಲವು ನಿಯಮಗಳನ್ನು ರೂಪಿಸಿದೆ. ಒಳಪಂಗಡ ವಿವಾಹಕ್ಕೆ ಈ ಸಮುದಾಯದಲ್ಲಿ ಮಾನ್ಯತೆ ಹೆಚ್ಚು. ಈ ವ್ಯವಸ್ಥೆಯು ಪತಿಪತ್ನಿಯರನ್ನು ಹತ್ತಿರ ತಂದು ಅವರನ್ನು ಭಾವನಾತ್ಮಕತೆಯ ವ್ಯಾಪ್ತಿಯೊಳಗೆ ಜೀವನ ನಡೆಸುವಂತೆ ಪ್ರೇರೆಪಿಸುವುದು ವಿವಾಹದ ಉದ್ದೇಶಗಳಲ್ಲಿ ಒಂದು. ಈ ಹಿನ್ನಲೆಯಿಂದ ಶ್ರೀನಿವಾಸ ಮಲ್ಯರ ವೈವಾಹಿಕ ಜೀವನದ ಒಳನೋಟಗಳು ಅವರ ವ್ಯಕ್ತಿತ್ವವನ್ನು ಅರಿತುಕೊಳ್ಳಲು ಪೂರಕವಾಗಿದೆ. ಸ್ವಾತಂತ್ರ್ಯ ಚಳುವಳಿಗೆ ತೊಡಗಿಸಿಕೊಂಡ ಸಂಧರ್ಭದಲ್ಲಿಯೇ ಅವರ ಮದುವೆಯ ಪ್ರಸ್ತಾಪವು ನಡೆದಿತ್ತು. ಪ್ರಸ್ತಾಪದ ಹಿಂದೆ ಬಂಟವಾಳದ ಶೀಮಂತ ಕುಟುಂಬವಾದ 'ಕನ್ನಡಿಬಾಗಿಲು' ಮನೆತನದ ಸಾಹುಕಾರ ದಾಮೋದರ ಪ್ರಭುಗಳ ಮಗಳು ಇಂದಿರಾ ಬಾಯಿಯನ್ನು ಸೂಚಿಸಲಾಗಿತ್ತು. ಇವರ ವಿವಾಹವು ಬಂಟವಾಳದಲ್ಲಿ ನೆರವೇರಿತು ಎಂದು ಕುಟುಂಬದ ಸದ್ಯಸರಾದ ಮೋಹನ ಮಲ್ಯರು ಪ್ರಸ್ತಾಪಿಸಿದ್ದರು[೬]. ಈ ದಾಂಪತ್ಯದ ಒಂದು ಕೊರತೆಯೆಂದರೆ ಮಕ್ಕಳಿಲ್ಲದಿರುವುದು. ಆದರೆ ಈ ಕೊರತೆಯು ಮಲ್ಯರ ಸಾರ್ವಜನಿಕ ಉತ್ಸುಕತೆಗೆ ಅಡಚಣೆಯಾಗಿರುವಂತೆ ಕಾಣುವುದಿಲ್ಲ. ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಭೂಗತವಾಗುವಿಕೆ, ಜೈಲುವಾಸ ಹಾಗೂ ಪ್ರವಾಸಗಳು ಅನಿವಾರ್ಯವಾಗಿದ್ದರೂ ಪತ್ನಿ ಇಂದಿರಾಬಾಯಿಯವರು ಸಂಪೂರ್ಣವಾಗಿ ಸಹಕರಿಸಿರುವುದು, ಮಲ್ಯರ ಕೆಲಸಕಾರ್ಯಗಳನ್ನು ಗೌರವಿಸುತ್ತಿದ್ದುದು ಪಾರಂಪರಿಕ ಕುಟುಂಬದ ಒಂದರಲ್ಲಿ ಮಹಿಳೆಯು ಪತಿಗೆ ನೀಡುವ ಬೆಂಬಲಕ್ಕೆ ಸಾಕ್ಷಿಯಾಗಿದೆ. ಪ್ರತಿಯೊಂದು ಪುರುಷನ ಹಿಂದೆ ಮಹಿಳೆಯ ಪಾತ್ರವಿದೆ ಎಂಬ ನುಡಿಗಟ್ಟನ್ನು ಇಂದಿರಬಾಯಿ ಸಾಕ್ಷೀಕರಿಸುತ್ತಾರೆ.

ಶ್ರೀನಿವಾಸ ಮಲ್ಯರವರ ಕೌಟುಂಬಿಕ ಬದುಕು, ದಿಲ್ಲಿಗೆ ಬದಲಾಯಿಸಿಕೊಂಡಾಗ ಇಂದಿರಾಬಾಯಿಯವರು ಸಾಂಪ್ರದಾಯಿಕ ಗ್ರಹಿಣಿಯಾಗಿ, ಎಲ್ಲಾ ಪ್ರೋತ್ಸಾಹವನ್ನು ನೀಡಿರುವುದು ಕಾಣುತ್ತದೆ. ಮಲ್ಯರ ಮನೆಯು ಈ ಜಿಲ್ಲೆಯಿಂದ ದಿಲ್ಲಿಗೆ ಹೋಗುತ್ತಿದ್ದ ಊರ ಜನತೆಗೆ ತಂಗುದಾಣವೂ ಆಗಿತ್ತು ಎಂದರೆ ಅತಿಶಯೋಕ್ತಿಯಾಗಲಾರದು. ಜನರು ಮಲ್ಯರ ಪತ್ನಿಯನ್ನು ಸಂಭೋಧಿಸುತ್ತಿದ್ದುದೇ "ಅಮ್ಮ" ಎಂಬುದಾಗಿ ಎನ್ನುವ ಅನುಭವ ಸಿದ್ಧ ಮಾತುಗಳು ಲಭ್ಯ. ಅತಿಥಿ ಸತ್ಕಾರವೆನ್ನುವುದು ಶ್ರೀನಿವಾಸ ಮಲ್ಯರ ಕುಟುಂಬವು ಅಳವಡಿಸಿಕೊಂಡಿದ್ದ ಅತೀ ಶ್ರೇಷ್ಟ ಮಾನವೀಯ ಮೌಲ್ಯವಾಗಿದೆ. ಮಲ್ಯರಿಗೆ ಜಾತಿಭೇದವೆಂಬುದಿರಲಿಲ್ಲ. ಆರಂಭದಲ್ಲಿ ಬಂಟ ಸಮುದಾಯದ ಶಂಕರ ಹೆಗಡೆ

ಎಂಬುವರು ದತ್ತು ಮಗನ ರೀತಿಯಂತೆ ನಡೆದು ಕೊಂಡಿದ್ದರು ಎನ್ನುವುದನ್ನು ಅವರ ಕುಟುಂಬದ ಸದಸ್ಯರು ತಿಳಿಸುತ್ತಾರೆ[೭].



ಶ್ರೀನಿವಾಸ ಮಲ್ಯ ದಂಪತಿಗಳ ಸತ್ಕಾರಗಳು ಹಾಗೂ ಆತ್ಮೀಯತೆಗೆ ಮನಸೋತ ಹಲವಾರು ಅಭಿಮಾನಿಗಳು ೧೯೬೧ ರಲ್ಲಿ ಶಷ್ಟಾಬ್ಧ ಸಮಾರಂಭವನ್ನು ಮಾಡಿರುವುದು ಈ ದಂಪತಿಗಳಿಗೆ ಸಂದ ಗೌರವವೆಂದು ಭಾವಿಸಬೇಕಾಗುತ್ತದೆ. ಈ ಸಂಧರ್ಭದಲ್ಲಿ ನೆನಪಿಗಾಗಿ, ಮಂಗಳೂರು ರಥಬೀದಿಯಲ್ಲಿರುವ ವೆಂಕಟರಮಣ ದೇವಸ್ಥಾನದ ಮುಂಭಾಗದಲ್ಲಿ ಮಲ್ಯರು ಅಶ್ವಥ ವೃಕ್ಷದ ಸಸಿಯನ್ನು ನೆಟ್ಟರು. ಇಂದು ಆ ಮರವು ಹೆಮ್ಮರವಾಗಿ ಬೆಳೆದು ಮಲ್ಯರ ಉದಾತ್ತ ಜೀವನಕ್ಕೆ ಸಾಕ್ಷಿಯಂತೆ ನಿಂತು ಕೊಂಡಿದೆ.

## ೨.೫. ಮುಕ್ತಾಯ

ಗೌಡ ಸಾರಸ್ವತ ಕೊಂಕಣಿ ಸಮುದಾಯಕ್ಕೆ ಸೇರಿದ್ದ ಶ್ರೀನಿವಾಸ ಮಲ್ಯರ ಕುಟುಂಬದಲ್ಲಿ ಈ ದೇಶದ ಪಾರಂಪರಿಕ ಮೌಲ್ಯಗಳು, ಆಚಾರ ವಿಚಾರ, ಪದ್ಧತಿ ಸಂಪ್ರದಾಯಗಳೆಲ್ಲವೂ ಪ್ರತಿಬಿಂಬಿಸಲ್ಪಟ್ಟಿರುವುದು ಕಂಡು ಬಂದಿದೆ. ಅವರ ಜೀವನ ಸಂಗಾತಿ ಇಂದಿರಾರವರ ಕುಟುಂಬವೂ ಇದಕ್ಕೆ ಪೂರಕವಾಗಿತ್ತು. ಶಿಕ್ಷಣವನ್ನು ಮಾತ್ರ ಶ್ರೀನಿವಾಸ ಮಲ್ಯರು ಗಂಭೀರವಾಗಿ ಪರಿಗಣಿಸಿದಂತೆ ಕಾಣುವುದಿಲ್ಲ. ಯಾಕೆಂದರೆ ಅವರಿಗೆ ದೇಶದ ಬಗೆಗಿನ ಸೆಳೆತ, ಸ್ವಾತಂತ್ರ ಹೋರಾಟದ ಆಕರ್ಷಣೆಯೇ ಶಿಕ್ಷಣಕ್ಕಿಂತಲೂ ಮುಖ್ಯವಾಗಿತ್ತು. ಮುಂದಿನ ಅಧ್ಯಾಯವು ಅದನ್ನು ಪರಿಶೀಲಿಸುತ್ತಿದೆ.

## ಪರಾಮರ್ಶನ ಗ್ರಂಥಗಳು


೧. ಚ. ನ. ಶಂಕರ್‌ರಾವ್, 'ಭಾರತೀಯ ಸಮಾಜ ಜೈಭಾರತ್ ಪ್ರಕಾಶನ ೧೯೯೧, ಮಂಗಳೂರು, ಪುಟ–೧೨೯.

೨. ಡಾ. ಬಿ. ವಿ. ಪಟ್ಟಾಭಿರಾಮ್; 'ಲೀಡರ್‌ಷಿಪ್', ವಾಸನ್ ಪಬ್ಲಿಕೇಷನ್ಸ್, ೨೦೦೮, ಬೆಂಗಳೂರು, ಪುಟ–೭.

೩. ಸಂದರ್ಶನ: ಜನಾರ್ಧನ ಪ್ರಭು; ಪ್ರೀತಿ ಅಪಾರ್ಟ್‌ಮೆಂಟ್ಸ್, ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ ೬–೭–೨೦೧೦.

೪. ಚ. ನ. ಶಂಕರ್‌ರಾವ್, 'ಸಮಾಜಶಾಸ್ತ್ರ', ಜೈಭಾರತ್ ಪ್ರಕಾಶನ, ಮಂಗಳೂರು, ೧೯೯೮, ಪುಟ–೮೫.

೫. ಬಸ್ತಿ ವಾಮನ ಶೆಣೈ; 'ಮೌಲ್ಯಾಧಾರಿತ ರಾಜಕಾರಣಿ– ಉಳ್ಳಾಲ ಶ್ರೀನಿವಾಸ ಮಲ್ಯ'; ಕಾಂತಾವರ ಕನ್ನಡ ಸಂಘ, ಉಡುಪಿ ಜಿಲ್ಲೆ, ಪುಟ–೨, ೩, ೪.

೬. ಸಂದರ್ಶನ: ಮೋಹನ ಮಲ್ಯ; ಲೀಲಾ ಮ್ಯಾನ್‌ಶೀಯನ್, ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ–೧೫–೭–೨೦೧೦.

೭. ಸಂದರ್ಶನ: ಜನಾರ್ಧನ ಪ್ರಭು; ಪ್ರೀತಿ ಅಪಾರ್ಟ್‌ಮೆಂಟ್ಸ್, ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ–೧೨–೭–೨೦೧೦.

# ಅಧ್ಯಾಯ – ೩

## ಶ್ರೀನಿವಾಸ ಮಲ್ಯರ ಸ್ವಾತಂತ್ರ್ಯ ಚಳುವಳಿ ಹೋರಾಟ, ದೇಶಭಕ್ತಿ, ರಾಜಕೀಯ ಮುತ್ಸದಿತನ ಹಾಗೂ ರಾಜಕೀಯ ಸವಾಲುಗಳ ವಿಶ್ಲೇಷಣೆ

## ಅಧ್ಯಾಯ – ೩

# ಶ್ರೀನಿವಾಸ ಮಲ್ಯರ ಸ್ವಾತಂತ್ರ್ಯ ಚಳುವಳಿ ಹೋರಾಟ, ದೇಶಭಕ್ತಿ, ರಾಜಕೀಯ ಮುತ್ಸದಿತನ ಹಾಗೂ ರಾಜಕೀಯ ಸವಾಲುಗಳ ವಿಶ್ಲೇಷಣೆ

ಸ್ವಾತಂತ್ರ್ಯ ಚಳುವಳಿಯಲ್ಲಿ ಶ್ರೀನಿವಾಸ ಮಲ್ಯರ ತೊಡಗುವಿಕೆ ದೇಶದ ಬಗೆಗಿದ್ದ ಅಭಿಮಾನ, ರಾಷ್ಟ್ರೀಯತೆಯ ಪರಿಕಲ್ಪನೆಗಳು ರಾಜಕೀಯ ಮುಖಂಡರೊಡನೆ ಮಲ್ಯರ ಸಂಪರ್ಕಗಳು ವಿವಿಧ ಆಯಾಮಗಳ ರಾಜಕೀಯ ನಾಯಕತ್ವ, ಇತ್ಯಾದಿಗಳನ್ನು ಸಂಶೋಧನೆಯಲ್ಲಿ ಪರಿಶೀಲಿಸುವಾಗ ಅದಕ್ಕೊಂದು ಅಡಿಪಾಯನ್ನೊದಗಿಸುವುದು ಅಗತ್ಯ. ಬ್ರೀಟಿಷ ಆಳ್ವಿಕೆ, ಹಾಗೂ ಸ್ವಾತಂತ್ರ್ಯ ಚಳುವಳಿ ಹೋರಾಟಗಳು ಮಲ್ಯರಿಗೆ ಅಪಾರವಾದ ಪ್ರಭಾವ ಬೀರಿದೆಯೆಂದು ಕಂಡುಬರುತ್ತದೆ. ಮಲ್ಯರು ಉನ್ನತ ವ್ಯಾಸಂಗವನ್ನು ಪಡೆಯುತ್ತಿದ್ದ ಹಂತದಲ್ಲಿ ಸ್ವಾತಂತ್ರ್ಯ ಹೋರಾಟಕ್ಕಿಳಿದ ಹಲವು ವ್ಯಕ್ತಿಗಳು ಮಲ್ಯರಿಗ ಆಕರ್ಷಿತರಾಗುತ್ತಾರೆ. ಈ ಹಿನ್ನಲೆಯಿಂದ ಬ್ರಿಟಿಷ್ ಆಡಳಿತ, ಆ ಆಡಳಿತವು ಸೃಷ್ಟಿಸಿದ ಅಸಮಾಧಾನಗಳು ದೇಶ ಪ್ರೇಮವಿದ್ದ ಭಾರತೀಯರ ಪ್ರತಿಸ್ಪಂದನಗಳು ಇತ್ಯಾದಿಗಳ ಅವಲೋಕನಗಳು ಅದ್ಯಯನ ದೃಷ್ಟಿಯಿಂದ ಮಹತ್ವವನ್ನು ಪಡೆಯುತ್ತದೆ.

### ೩.೧. ಭಾರತದಲ್ಲಿ ಬ್ರಿಟಿಷರ ಆಳ್ವಿಕೆ

ಭಾರತದಲ್ಲಿ ಬ್ರಿಟಿಷರು ತಮ್ಮ ಆಡಳಿತವನ್ನು ಸ್ಥಾಪಿಸಿದ ನಂತರ ಭಾರತದ ಜನರಿಗೆ ಅಪ್ರಿಯವಾಗಿದ್ದ ಅನೇಕ ನೀತಿಗಳನ್ನು ಜಾರಿಗೆ ತಂದರು. ಈಸ್ಟ ಇಂಡಿಯಾ ಕಂಪೆನಿ, ಇಂಗ್ಲೆಂಡಿನ ವಾಣಿಜ್ಯ ಅಭ್ಯುದಯಗಳಿಗೆ ಬ್ರಿಟಿಷರು ಹೆಚ್ಚಿನ ಮಹತ್ವ ನೀಡಿರುವುದು ಕಾಣುತ್ತದೆ. ಈ ಉದ್ದೇಶಗಳು ಭಾರತದಲ್ಲಿ ವ್ಯತಿರಿಕ್ತ ಪರಿಣಾಮಗಳನ್ನುಂಟು ಮಾಡಿದ್ದು ಅಂದಿನ ಅರಾಜಿಕತೆ ರಾಜರಲ್ಲಿ ಪರಸ್ಪರ ವೈಶಮ್ಯ ಬೆಳಸುವಿಕೆ, ಭಾರತೀಯರನ್ನು ಹೀನಾಯವಾಗಿ ಕಾಣುವಿಕೆ ಇತ್ಯಾದಿಗಳ ಜೊತೆಗೆ ರಾಜಕೀಯ ಪ್ರಭುತ್ವವನ್ನು ಪಡೆದು ಭಾರತದ ಒಡೆಯರಾದರು ಎನ್ನುವುದು ಇಂದು ಇತಿಹಾಸ. ಒಟ್ಟು ಬ್ರಟೀಷ್ ಅಳ್ವಿಕೆ ಮೂರು ಶತಮಾನಗಳಿಗೂ ಹೆಚ್ಚು, ಮತ್ತು ಈ ಆಳ್ವಿಕೆಯು ಸಾಮ್ರ್ಯಾಜ್ಯಶಾಹಿ ನೀತಿಯನ್ನು ಪ್ರತಿಪಾದಿಸಿತು ಅಂದಿನ ಬ್ರಿಟಿಷ್ ನಾಯಕರಾಗಿದ್ದ ರೋಬರ್ಟ್ ಕ್ಲೈವ್, ವಾರನ್‌ಹೇಸ್ಟಿಂಗ್ಸ್, ಲಾರ್ಡ್ ವೆಲ್ಲೆಸ್ಲಿ, ಡಾಲ್ ಹೌಸಿ ಮುಂತಾದವರು ಪ್ರಾಂತೀಯ ರಾಜರುಗಳನ್ನು ಹತ್ತಿಕ್ಕೆ ಬ್ರಟಿಷ್ ಸಾಮ್ರಾಜ್ಯವನ್ನು ಭದ್ರಪಡಿಸಿದ್ದರು ಎನ್ನುವುದು ಚರಿತ್ರೆಯಿಂದ ತಿಳಿದುಬರುತ್ತದೆ[೧].

ಬ್ರಿಟಷರ ವಸಾಹತು ನೀತಿಯಿಂದಾಗಿ ಭಾರತೀಯರು ದಾಸ್ಯ ಶ್ರಂಖಲೆಗಳಿಗೆ ಒಳಗಾದರು. ಬ್ರಿಟೀಷ್ ನೀತಿಯಿಂದ ಅವಮಾನಿತರಾದ ಭಾರತೀಯರು ಆ ಆಳ್ವಿಕೆಯ ವಿರುಧ್ಧ ಹೋರಾಟ ಮಾಡಿದ ಮೊದಲ ಪ್ರಯತ್ನ ೧೮೫೭ ರ ಪ್ರಥಮ

ಸ್ವಾತಂತ್ರ್ಯ ಸಂಗ್ರಾಮವಾಗಿತ್ತು. ಈ ಬಂಡಾಯವು ಬ್ರಿಟಿಷ್ ಆಳ್ವಿಕೆಗೆ ಮೊದಲ ಸವಾಲು ಎಂದರೆ ತಪ್ಪಾಗಲಾರದು. ವಸಾಹತುಶಾಹಿ ಹತೋಟಿಯಲ್ಲಿ ರಾಜಕೀಯ ಅಕ್ರಮ ನೀತಿ, ಆರ್ಥಿಕ ಶೋಷಣೆ ಹಾಗೂ ಸಾಮಾಜಿಕ ಅವಹೇಳನಗಳನ್ನು ಭಾರತೀಯರು ಸಹಿಸುದಿಲ್ಲ ಎನ್ನುವುದಕ್ಕೆ ೧೮೫೭ ರ ಹೋರಾಟವು ಒಂದು ಸಾಕ್ಷಿಯನ್ನು ಒದಗಿಸುತ್ತದೆ. ರಾಷ್ಟ್ರೀಯ ಭಾವನೆ ಸ್ವಾಭಿಮಾನ ಹಾಗೂ ದೇಶ ಭಕ್ತಿಯನ್ನು ಭಾರತದ ಜನತೆ ವ್ಯಕ್ತಪಡಿಸಿದ ಹೋರಾಟವಾಗಿತ್ತು.

ಭಾರತದಲ್ಲಿ ಬ್ರಿಟಿಷರ ಆಳ್ವಿಕೆ ಆರಂಭವಾಗಿದ್ದ ದಿನದಿಂದ ಸ್ವಾತಂತ್ರ್ಯ ಪಡೆಯುವ ತನಕವೂ, ರಾಷ್ಟ್ರಾಭಿಮಾನ ಮುಂತಾದುವುಗಳು ಒಂದು ಸರಳ ರೇಖೆಯಂತೆ ಬೆಳೆಯಲಿಲ್ಲವೆನ್ನುವುದು ಸ್ವಾತಂತ್ರ್ಯ ಹೋರಾಟದ ಮಜಲುಗಳನ್ನು ಪರಿಶೀಲಿಸುವಾಗ ತಿಳಿಯುತ್ತದೆ. ರಾಷ್ಟ್ರೀಯತೆಯ ಬೆಳವಣಿಗೆಗಳು ಈ ದೇಶದಲ್ಲಿ ಏಕರೂಪವಾಗಿರಲಿಲ್ಲ. ಸ್ಥಳೀಯ ರಾಜಕೀಯದೊಂದಿಗೆ ಅನೇಕ ಸಂದರ್ಭಗಳಲ್ಲಿ ಮುಖಾಮುಖಿಯಾಗಿದ್ದು ಈ ಬೆಳವಣಿಗೆಯ ರೀತಿಯನ್ನು ಅಧ್ಯಯನ ಮಾಡುವುದು ಕಷ್ಟಕರವಾಗಿತ್ತು. ಆದರೆ ಏನೇ ಸಮಸ್ಯೆಗಳು ಎದುರಾದರೂ ಭಾರತದ ರಾಷ್ಟ್ರೀಯತೆ ಎನ್ನುವುದು ಬ್ರಿಟಿಷರ ವಿರುದ್ಧವಾಗಿ ನಡೆದ ನಗ್ನ ಸತ್ಯ ಎನ್ನುವುದನ್ನು ಇತಿಹಾಸ ತಿಳಿಸಿದೆ[೩].

ಕ್ರಿ. ಶ. ೧೮೬೦ ರ ನಂತರ ಬ್ರಿಟಿಷರ ಆಳ್ವಿಕೆಯ ನಿಜ ಸ್ವರೂಪಗಳು ಭಾರತೀಯರಿಗೆ ಹೆಚ್ಚು ಅರ್ಥವಾಗತೊಡಗಿತು. ದಾದಾಬಾಯಿ ನವರೋಜಿಯಂತಹ ಆರ್ಥಿಕ ಚಿಂತಕರು ಭಾರತದಿಂದ ಇಂಗ್ಲೆಂಡಿಗೆ ಹರಿದು ಹೋಗುವ ಸಂಪತ್ತಿನ ಬಗ್ಗೆ ದೇಶದ ಗಮನ ಸೆಳೆದಿದ್ದರು. ಇದರಿಂದಾಗಿ ಈ ದೇಶದ ಪ್ರತಿವರ್ಗದವರೂ ಬ್ರಿಟಿಷ್ ವಿರೋಧಿ ಚಳುವಳಿಯಲ್ಲಿ ಭಾಗವಹಿಸಲು ಸ್ಫೂರ್ತಿಯನ್ನು ಪಡೆದಿರುವುದು ಕಾಣುತ್ತದೆ. ೧೮೫೮ ರ ನಂತರ ಬ್ರಿಟಿಷ ರಾಣಿ ವಿಕ್ಟೋರಿಯರವರು ಭಾರತದಲ್ಲಿ ಕಂಪೆನಿಯ ಆಳ್ವಿಕೆಯನ್ನು ಕೊನೆಗೊಳಿಸಿ, ದೇಶವನ್ನು ನೇರ ಆಳ್ವಿಕೆಗೆ ಒಳಪಡಿಸಿದ್ದ ಕಾರಣ, ಆಕ್ರೋಶಿತ ಭಾರತೀಯರ ಮನಸ್ಸಿನಲ್ಲಿ ರಾಷ್ಟ್ರೀಯತೆಯು ದಿನದಿಂದ ದಿನಕ್ಕೆ ಚುರುಕಾಯಿತು ಎನ್ನುವುದು ಇತಿಹಾಸ ವರದಿಗಳಿಂದ ಲಭ್ಯವಿದೆ ಹಾಗೂ ರಾಷ್ಟ್ರೀಯತೆಯು ಭಾರತದ ಸಮಾಜದಲ್ಲಿ ವರ್ಗಗಳನ್ನು ಸೃಷ್ಟಿಸಿತು ಎನ್ನಲಾಗಿದೆ[೩]. ಮದ್ಯಮ ವರ್ಗದ ಉದಯದಿಂದಾಗಿ, ಅವರ ಮೇಲೆ ಇಂಗ್ಲೀಷ ಬಾಷೆಯ ಪ್ರಭಾವದಿಂದಾಗಿ ಬ್ರಿಟಿಷ್ ಆಡಳಿತದಲ್ಲಿ ನೌಕರಿ ಪಡೆದು ಸ್ಥಾನಮಾನಗಳನ್ನು ಪಡೆದ ನಿದರ್ಶನವೊಂದು ನಮಗೆ ಸಿಗುತ್ತದೆ. ಈ ವರ್ಗದ ಜನರಿಗೆ ಯುರೋಪಿನ ವಿಚಾರಧಾರೆಗಳು, ಉದಾರನೀತಿ, ಪ್ರಜಾಪ್ರಭುತ್ವ ಮೌಲ್ಯಗಳು, ಬ್ರಿಟಿಷ್ ಜೀವನ ಶೈಲಿಗಳು ಪ್ರಭಾವವನ್ನು ಬೀರಿರುವುದು ಕಾಣುತ್ತದೆ. ಯುರೋಪ್ ರಾಜಕೀಯ ಚಿಂತನೆಗಳಿಂದ ಪ್ರಭಾವಿತರಾದ ಅನೇಕರು ಭಾರತದಲ್ಲಿ ಪ್ರಜಾಪ್ರಭುತ್ವ ಮೌಲ್ಯಗಳನ್ನು ಅನುಷ್ಟಾನಗೊಳಿಸುವ ಪ್ರಯತ್ನ ಮಾಡಿದ್ದರು. ಇದ್ದಕ್ಕೆ ಸಾಕ್ಷಿ ರಾಷ್ಟ್ರೀಯ ಕಾಂಗ್ರೆಸ್ ಮುಂದೆ ರಾಷ್ಟ್ರೀಯ ಕಾಂಗ್ರೆಸ್, ಜನ ಸಾಮನ್ಯರು ಹಕ್ಕುಗಳು ಮತ್ತು ಸಾಂಸ್ಕ್ರತಿಕ ಸಂರಕ್ಷಣೆಯನ್ನು ಮಾಡುವ ಪ್ರಯತ್ನಗಳನ್ನು ನಡೆಸಿದ್ದರು ಮತ್ತು ಜನಜಾಗ್ರತಿಯನ್ನು ಉಂಟುಮಾಡಿದರು ಎನ್ನುವುದಕ್ಕೆ ಆಧಾರವಿದೆ.

ಬ್ರಿಟಿಷರ ವಿರುದ್ಧದ ಹೋರಾಟಗಳು ನಿರಂತರವಾಗಿ ಮುಂದುವರೆಯಿತು, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನಲ್ಲಿ ಮಂದಗಾಮಿಗಳು ಹಾಗೂ ತೀವ್ರಗಾಮಿಗಳೆಂಬ ಎರಡು ಬಣಗಳಾದರೂ ಅಂದಿನ ನಾಯಕತ್ವದ ಪ್ರಭಾವವು ಯುವ ಜನತೆಯ ಮನಸ್ಸಿನ ಮೇಲೆ ಪ್ರಭಾವವನ್ನು ಬೀರಿದ್ದವು. ಭಾರತೀಯ ಸ್ವಾತಂತ್ರ್ಯ ಹೋರಾಟಗಳಲ್ಲಿ ಗೋಪಾಲ ಕೃಷ್ಣ ಗೋಖಲೆ, ಸುರೇಂದ್ರನಾಥ ಬ್ಯಾನರ್ಜಿ, ಡಾ। ರಾಶ್ ಬಿಹಾರಿ ಬೋಸ್ ಮಂದಗಾಮಿನಳ ಸಾಲಿನಲ್ಲಿ, ತಿಲಕ್, ಆ್ಯನಿಬೆಸಂಟ್ ಲಾಲ್ ಬಾಲ್ ಪಾಲ್ ಮೊದಲಾದವರು ತೀವ್ರಗಾಮಿಗಳ ಸಾಲಿನಲ್ಲಿ ಕಂಡರೂ, ರಾಜಕೀಯ ನಾಯಕತ್ವದ ಕುರಿತಂತೆ ಅವರ ಕೊಡುಗೆಗಳು ಚಿರಸ್ಮರಣೀಯವಾಗಿವೆ ಎನ್ನುವುದನ್ನು ಚಾರಿತ್ರಿಕ ದಾಖಲೆಗಳು ಸ್ಪಷ್ಟೀಕರಿಸಿವೆ.

ಅನೇಕ ಯುವಜನತೆ ಸ್ವಾತಂತ್ರ್ಯ ಚಳುವಳಿಗಳಿಗೆ ದುಮುಕಲು ಪ್ರಮುಖ ಪ್ರೇರಕ ಶಕ್ತಿಯಾಗಿ ಮಹಾತ್ಮಾ ಗಾಂಧೀಜಿಯವರು ಕಾಣುತ್ತಾರೆ. ೧೯೧೭ ರಲ್ಲಿ ಗಾಂಧೀಜಿಯವರು ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಮರಳಿದ ನಂತರ ಸ್ವಾತಂತ್ರ್ಯ ಸಂಗ್ರಾಮಗಳಿಗೆ ಹೊಸದೊಂದು ಆಯಾಮವು ಸಿಕ್ಕಿರುವುದನ್ನು ನಿರಾಕರಿಸುವಂತಿಲ್ಲ. ಇದು ''ಗಾಂಧಿಯುಗ''ವೆಂಬ ಕಾಲಘಟ್ಟವನ್ನು ಸೃಷ್ಟಿಸಿತು. ಗಾಂಧೀಜಿಯವರ ನೇತ್ರತ್ವದಲ್ಲಿ ಸ್ವಾತಂತ್ರ್ಯ ಹೋರಾಟಗಳು ಕೆಲವು ಏಳು ಬೀಳುಗಳ ಜೊತೆಗೆ ತೀವ್ರತೆಯನ್ನು ಪಡೆದಿತ್ತು. ಗಾಂಧೀಜಿಯವರ ಸತ್ಯಾಗ್ರಹ, ಅಹಿಂಸಾ ಮಾರ್ಗಗಳು ಸತ್ಯದ ಮೇಲಿನ ಪ್ರೇಮ, ಸರಳ ಸಜ್ಜನಿಕೆಯ ಜೀವನ ಶೈಲಿ ಇತ್ಯಾದಿಗಳು ಅನೇಕ ಯುವಕರನ್ನು ಪ್ರಭಾವಿಸಿರುವುದು ಕಾಣುತ್ತದೆ. ಅನೇಕರಿಗೆ ಗಾಂಧೀಜಿ ಮಾದರಿ ವ್ಯಕ್ತಿತ್ವವನ್ನು ತೋರಿದವರಾಗಿದ್ದರು. ಬ್ರಿಟಿಷರ ವಿರುದ್ಧ ಗಾಂಧೀಜಿಯವರು ಪ್ರಯೋಗಿಸಿದ ಸತ್ಯಾಗ್ರಹ, ಅಸಹಾಕಾರ, ಮತ್ತು ಅಹಿಂಸಾ ವಿಧಾನಗಳು ಭಾರತಕ್ಕೆ ಸ್ವಾತಂತ್ರ್ಯವನ್ನು ಮರುಪಡೆಯುವಲ್ಲಿ ಯಶಸ್ವಿಯಾಗಿತ್ತು. ಗಾಂಧೀಜಿಯವರ ವ್ಯಕ್ತಿತ್ವದಿಂದ ಪ್ರಭಾವಿತಗೊಂಡವರಲ್ಲಿ ಉಳ್ಳಾಲ ಶ್ರೀನಿವಾಸ ಮಲ್ಯರು ಒಬ್ಬರು.

## ೩.೨. ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟದ ಬೆಳವಣಿಗೆ

೧೯೨೪ ರಲ್ಲಿ ಬೆಳಗಾವಿಯಲ್ಲಿ ಗಾಂಧೀಜಿಯವರು, ಕಾಂಗ್ರೆಸಿನ ಅಧ್ಯಕ್ಷತೆಯನ್ನು ವಹಿಸಿದ ಬಳಿಕ ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ಚಾಲನೆ ದೊರಕಿತು. ಗಾಂಧೀಜಿಯವರ ಸತ್ಯಾಗ್ರಹದ ಕಲ್ಪನೆಗಳು ಸ್ಪಷ್ಟವಾಗಿ ಮೈಸೂರು ರಾಜ್ಯದ ಉದ್ದಗಲಕ್ಕೂ ಹೊಸ ಅಲೆಗಳನ್ನು ಎಬ್ಬಿಸಿರುವುದು ಕಾಣುತ್ತದೆ. ಗಾಂಧೀಜಿಯವರ ವಿವಿಧ ಚಳವಳಿಗಳಾದ, ಕಾನೂನು ಭಂಗ ಚಳವಳಿ, ಉಪ್ಪಿನ ಸತ್ಯಗ್ರಾಹ, ಕರನಿರಾಕರಣ ಚಳವಳಿ ಮುಂತಾದವುಗಳು ಕರ್ನಾಟಕದ ಜನತೆಯಲ್ಲಿಯೂ ಹೋರಾಟದ ಸ್ಫೂರ್ತಿಯನ್ನು ಸೃಷ್ಟಿಸಿತು. ಈ ಭಾಗದ ಜನತೆಯಲ್ಲಿಯೂ ಅಪಾರವಾದ ದೇಶ ಪ್ರೇಮ ಹಾಗೂ ದೃಡನಿರ್ಧಾರಗಳಿದ್ದದ್ದು ಕಂಡು ಬರುತ್ತದೆ. ಶಿಕಾರಿ ಪುರದ ಈಸೂರಿನಂತಹ ಪುಟ್ಟ ಗ್ರಾಮದ ಜನಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿರುವುದು ಇದಕ್ಕೆ ಸಾಕ್ಷಿಯಾಗಿದೆ.

## ೩.೩. ಸ್ವಾತಂತ್ರ್ಯ ಚಳುವಳಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆ

ದೇಶಾದಾದ್ಯಂತ ೧೯ ನೇ ಶತಮಾನದ ಮಧ್ಯ ಭಾಗದಲ್ಲೇ ವಿವಿದೆಡೆ ಸ್ವಾತಂತ್ರ್ಯ ಚಳುವಳಿಯು ತೀವ್ರತೆಯನ್ನು ಪಡೆದುಕೊಂಡಿದ್ದರು. ಕರ್ನಾಟಕದ ಕರಾವಳಿ ಭಾಗವು ಸ್ವಾತಂತ್ರ್ಯ ಚಳುವಳಿಯ ಪ್ರಭಾವಕ್ಕೆ ಹೆಚ್ಚು ಒಳಗಾಗಿರಲಿಲ್ಲ ಎನ್ನುವುದು ಸ್ವಾತಂತ್ರ್ಯ ಹೋರಾಟಗಳ ವಿವಿಧ ಆಯಾಮಗಳನ್ನು ಪರಿಶೀಲಿಸುವಾಗ ಕಾಣುತ್ತದೆ. ೧೯೨೦ ರ ತನಕ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ ಸಂಬಂಧ ಹೆಚ್ಚೇನೂ ಪರಿಣಾಮಕಾರಿ ಚಟುವಟಿಕೆಗಳಾಗಿರಲಿಲ್ಲ. ಕೇವಲ ಬೆರಳೆಣಿಕೆಯಷ್ಟೇ ನಾಯಕರು ಸ್ವಾತಂತ್ರ್ಯ ಚಳುವಳಿಯಲ್ಲಿ ಆಸಕ್ತಿ ವಹಿಸಿದ್ದರು. ಉದಾಹರಿಸುವುದಾದರೆ ಕಾರ್ನಾಡು ಸದಾಶಿವ ರಾಯರು ಆದರೆ ದಕ್ಷಿಣ ಕನ್ನಡ ಜಿಲ್ಲೆಗೆ ಗಾಂಧೀಜಿಯವರು ಬೇಟಿ ನೀಡಿ, ಸ್ವಾತಂತ್ರ್ಯ ಚಳವಳಿಯ ಮಹತ್ವದ ಬಗ್ಗೆ ಜನರಿಗೆ ತಿಳಿಸಿದಾಗ ಈ ಭಾಗದ ಜನತೆಯಲ್ಲಿ ರಾಷ್ಟ್ರಾಭಿಮಾನದ ಜಾಗ್ರತೆಯೊಂದು ಮೂಡಲು ಸಾದ್ಯವಾಯಿತು. ಚಳುವಳಿಯನ್ನು ಕಾರ್ನಾಡು ಸದಾಶಿವರಾಯರು ತಮ್ಮ ಮೊದಲ ನಾಯಕತ್ವದ ಮೂಲಕ ಚಾಲನೆ ನೀಡಿದರು. ಸ್ವಾತಂತ್ರ್ಯವೆನ್ನುವುದು ಸದಾಶಿವರಾಯರಿಗೆ ಬಹಳ ದೊಡ್ಡ ಮೌಲ್ಯವಾದುದ್ದರಿಂದ ತಮ್ಮ ಪೂರ್ಣಬದುಕನ್ನು ದೇಶಕ್ಕಾಗಿಯೇ ತ್ಯಾಗ ಮಾಡಿರುವುದು, ಅವರ ವ್ಯಕ್ತಿ ವಿಶೇಷತೆಯನ್ನು ತೋರಿಸುತ್ತದೆ[೪].

೧೯೪೨ ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಮಂಗಳೂರು, ಉಡುಪಿ, ಬಂಟ್ವಾಳ, ಪುತ್ತೂರು, ಕುಂದಾಪುರ ಮೊದಲಾದ ಕಡೆಗಳಲ್ಲಿ ವೈಯ್ಯಕ್ತಿಕ ಆಸಕ್ತಿಯಿಂದ ಕೆ. ಈಶ್ವರ್ ರಾಮಕೃಷ್ಣ ಕಾರಂತ್, ಯು ಪಿ ಮಲ್ಯ ಮೊದಲಾದವರು ಭಾಗವಹಿಸಿರುವುದು ಕಾಣುತ್ತದೆ. ಚಳುವಳಿಯ ಪ್ರಮುಖ ನಾಯಕತ್ವವನ್ನು ಲೋಕಯ್ಯ ಶೆಟ್ಟಿ, ಎನ್, ಕೇಶವ ಕುಡ್ವ ಮೊದಲಾದವರು ತೋರಿರುವುದು ಕಾಣುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ ಎಸ್. ಎನ್ ಹೊಳ್ಳ, ನಾರಾಯಣ ಶೆಟ್ಟಿ, ಎಮ್. ಪಿ. ಅಧಿಕಾರಿ ಮೊದಲಾದವರು. ಸದಾ ಹರಿಜನ ಸೇವಾ ಚಟುವಟಿಕೆಗಳಿಂದ ಪ್ರಭಾವಿತರಾಗಿರುವುದು ಕಾಣುತ್ತದೆ. ಯುವ ವಿದ್ಯಾರ್ಥಿಗಳಾಗಿದ್ದ ಎಸ್ ಮಹಾಬಲೇಶ್ವರ ಭಟ್, ರಾಮಚಂದ್ರ ಭಟ್, ತಿರುಮಲೇಶ್ವರ ಭಟ್, ವಿ ಯೋಗೇಶ್ವರ ಮಲ್ಯ ಮೊದಲಾದವರು ಸ್ವಾತಂತ್ರ್ಯ ಚಳುವಳಿ ಹೋರಾಟದಲ್ಲಿ ಭಾಗವಹಿಸಿರುವುದು ಕಂಡು ಬರುತ್ತದೆ[೫].

೧೯೨೨ ರ ನಂತರದ ಫೆಬ್ರವರಿ ೯ ಮತ್ತು ೧೦ನೆಯ ಎರಡು ದಿನಗಳು ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ ಮತ್ತು ರಾಜಕೀಯ ಸ್ವರೂಪಕ್ಕೆ ಸಂಬಂದಿಸಿದ ಐತಿಹಾಸಿಕ ದಿನಗಳು. ಯಾಕೆಂದರೆ ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಅಭಿಯಾನಕ್ಕೆ ಪರಿಷತ್ ಸಂಘಟನೆಯೊಂದನ್ನು ಆಯೋಜಿಸಲು ನಿರ್ಣಯಗಳನ್ನು ತೆಗೆದುಕೊಂಡಿದ್ದರು. ಕರ್ನಾಟಕ ರಾಜಕೀಯ ಪರಿಷತ್ತಿನ ಅಧ್ಯಕ್ಷತೆಯನ್ನು ಸರೋಜಿನಿ ನಾಯ್ಡುರವರು ವಹಿಸಿದ್ದರು. ದಕ್ಷಿಣ ಕನ್ನಡದಲ್ಲಿ ಈ ಸಂಘಟನಾತ್ಮಾಕ ಚಳವಳಿಯು ಇತರ ಅನೇಕ ಸಮಸ್ಯೆಗಳಿಗೆ ಪರಿಹಾರ ನೀಡುವಲ್ಲಿಯೂ ಆಸಕ್ತಿ ತೋರಿದ್ದು ಅಸ್ಪೃಶ್ಯತಾ ನಿವಾರಣೆ, ಮದ್ಯಪಾನ ನಿಷೇದ, ಅಸಹಕಾರ ಚಳುವಳಿ ಅಹಿಂಸಾತ್ಮಕ ಹೋರಾಟ ಮುಂತಾದ ವಿಚಾರಗಳಿಗೆ ಆದ್ಯತೆ ದೊರಕಿರುವುದನ್ನು ಮಂಗಳೂರಿನ ಪ್ರಖ್ಯಾತ ಪತ್ರಕರ್ತರಾದ ಮನೋಹರ ಪ್ರಸಾದರವರು ಉಲ್ಲೇಖಿಸುತ್ತಾರೆ[೬].

ಸ್ವಾತಂತ್ರ್ಯ ಹೋರಾಟದಲ್ಲಿ ಜಿಲ್ಲೆಯ ಅನೇಕ ದೇಶಭಕ್ತರು, ತ್ಯಾಗ, ದೇಶಭಕ್ತಿ, ಸೇವೆ ಇತ್ಯಾದಿಗಳಿಗೆ ಸಮರ್ಪಿಸಿಕೊಂಡು ಈ ಜಿಲ್ಲೆಯಲ್ಲಿ ಅದ್ಭುತವಾದ ಪರಂಪರೆಯನ್ನು ದಾಖಲಿಸಿದರು. ಈ ಪರಂಪರೆಯು ಉಳ್ಳಾಲ ಶ್ರೀನಿವಾಸ ಮಲ್ಯರನ್ನು ಸಂಪೂರ್ಣವಾಗಿ ದೇಶಕ್ಕಾಗಿ ಸೇವೆ ಸಲ್ಲಿಸಲು ಪ್ರೇರಕಶಕ್ತಿಯಾಗಿದೆ ಎಂದರೆ ತಪ್ಪಾಗಲಾರದು. ದಕ್ಷಿಣ ಕನ್ನಡ. ಜಿಲ್ಲೆಯಲ್ಲಿ ೧೯೧೯ ರಿಂದ ೪೭ ರ ಅವಧಿಯಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯ ಹಲವಾರು ಸ್ಮರಣೀಯ ಘಟನೆಗಳಿವೆ. ದಕ್ಷಿಣ ಕನ್ನಡ ಜನತೆಯ ದೇಶಭಕ್ತಿಯನ್ನು ಪ್ರತಿಬಿಂಬಿಸಿದ ಸ್ವಾತಂತ್ರ್ಯ ಪೂರ್ವದ ಜನಪ್ರಿಯ ದೈನಿಕೆಗಳು ಜನಮನದ ಮೇಲೆ ಅಪಾರ ಪ್ರಭಾವ ಬೀರಿದ್ದವು ಎನ್ನುವುದು ದಾಖಲಿತ ಉಲ್ಲೇಖದಿಂದ ತಿಳಿಯುತ್ತದೆ.

## ೩.೪. ಶ್ರೀನಿವಾಸ ಮಲ್ಯರ ರಾಜಕೀಯ ಒಲವುಗಳು

ಸಾಂಪ್ರದಾಯ ಬದ್ಧ ವ್ಯಾಪಾರಸ್ಥ ಕುಟುಂಬದಲ್ಲಿ ಜನಿಸಿದ ಶ್ರೀನಿವಾಸ ಮಲ್ಯರ ಕುಟುಂಬದಲ್ಲಿಯೇ ಕೆಲವಾರು ಶ್ರೇಷ್ಠ ಮೌಲ್ಯಗಳು ಮೈಗೂಡಿಸಿರುವುದು ಕಂಡು ಬರುತ್ತದೆ. ಅವುಗಳನ್ನು ದೇಶಭಕ್ತಿ, ತ್ಯಾಗ ಹಾಗೂ ನಿಸ್ವಾರ್ಥ ಮನೋಭಾವನೆಗಳೆಂದು ಗುರತಿಸಬಹುದಾಗಿದೆ. ಇಂತಹ ಮೌಲ್ಯಗಳು ಅವರ ಸಾರ್ವಜನಿಕ ವಲಯವನ್ನು ಪ್ರವೇಶಿಸಿದ ದಿನದಿಂದಲೂ, ಕಾರ್ಯಚಟುವಟಿಕೆಗಳಲ್ಲಿ ಅಭಿವ್ಯಕ್ತಗೊಂಡಿದೆ. ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಅಂದಿನ ಇಂಟರ್ ಮಿಡಿಯೆಟ್ ಕ್ಲಾಸಿಗೆ ಸೇರ್ಪಡೆಗೊಂಡ ಸಂದರ್ಭದಲ್ಲಿಯೇ ಅವರ ಮನಸ್ಸು ರಾಷ್ಟ್ರದ ರಾಜಕೀಯ ಸ್ಥಿತಿಗತಿ, ಹಾಗೂ ಸ್ವಾತಂತ್ರ್ಯ ಚಳುವಳಿಯತ್ತ ವಾಲಿರುವುದು ಕಾಣುತ್ತದೆ, ಬಹುಶ: ಈ ಕಾರಣಕ್ಕಾಗಿಯೇ ಶ್ರೀನಿವಾಸ ಮಲ್ಯರು ಸಾಂಪ್ರದಾಯಿಕ ಶಿಕ್ಷಣಕ್ಕೆ ಹೆಚ್ಚಿನ ಮಾನ್ಯತೆನೀಡಲಿಲ್ಲ ಎನ್ನುವುದನ್ನು ಈ ಅದ್ಯಯನ ಸಂದರ್ಭದಲ್ಲಿ ಗಮನಿಸಬೇಕಾಗುತ್ತದೆ. ಜೊತೆಗೆ, ಜನಸಾಮಾನ್ಯರ ಬಗ್ಗೆ ಬಡವರ ಬಗ್ಗೆ ಸಹಜವಾಗಿಯೇ ಕಾಳಜಿ ಇರುವುದು ಕಾಣುತ್ತದೆ. ಉದಾಹರಿಸಬಹುದಾದರೆ ವಿದ್ಯಾರ್ಥಿಯಾಗಿದ್ದಾಗ ಪ್ರತಿ ತಿಂಗಳೂ ಸಿಗುತ್ತಿದ್ದ ಎರಡು ರೂಪಾಯಯಲ್ಲಿ ಒಂದು ರೂಪಾಯಿಯನ್ನು ಬಡ ಕುರುಡು ಬಿಕ್ಷುಕನಿಗೆ ತಪ್ಪದೇ ನೀಡುತ್ತಿದ್ದದ್ದು ಅವರ ಉದಾರ ಮನಸ್ಸಿಗೆ ಸಾಕ್ಷಿಯಾಗಿದೆ. ನಿಕ್ರಿಷ್ಟ ಸ್ಥಿತಿಯಲ್ಲಿರುವ ಜನರ ಬಗ್ಗೆ ಅತಿ ಕಾಳಜಿ ಇದ್ದ ಶ್ರೀನಿವಾಸ ಮಲ್ಯರನ್ನು ಗಾಂಧೀಜಿಯ ಹರಿಜನ ಉದ್ಧಾರದ ಯೋಜನೆಗಳೂ ಬೆಳೆಸಿದೆ[1].

ಕಾಲೇಜು ವಿದ್ಯಾಭ್ಯಾಸವನ್ನು ಪಡೆಯುವ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟಗಳು ತೀವ್ರಗೊಳ್ಳುತ್ತಿದ್ದಾಗಲೇ ಮಂಗಳೂರಿಗೆ ಆಗಮಿಸಿದ ಮಹಾತ್ಮಗಾಂಧೀಜಿಯವರ ವ್ಯಕ್ತಿತ್ವವು ಶ್ರೀನಿವಾಸ ಮಲ್ಯರನ್ನು ಪ್ರಭಾವಿಸಿದೆ. ಅಖಿಲ ಭಾರತ ಕಾಂಗ್ರೆಸ್ ಪಕ್ಷದ ತತ್ವಗಳು ಆದರ್ಶಗಳೂ ಅವರಿಗೆ ಅತ್ಯಂತ ಪ್ರಿಯವಾಗಿರುವುದು ಕಾಣುತ್ತದೆ. ಅದನ್ನೇ ಆಧಾರವನ್ನಾಗಿಸಿಕೊಂಡು ದೇಶದಲ್ಲಿ ತನ್ನ ರಾಜಕೀಯ ವರ್ಚಸ್ಸೊಂದನ್ನು ಮೂಡಿಸಿಕೊಂಡು ಜಿಲ್ಲೆಯ ಹಾಗೂ ಒಟ್ಟು ದೇಶದ ಅಭಿವೃದ್ಧಿಗೆ ಅನುಕೂಲಕಾರಿಯಾಗಿರುವ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂಬ ದೂರದರ್ಶಿತ್ವವೊಂದು ಶ್ರೀನಿವಾಸ ಮಲ್ಯರ ವ್ಯಕ್ತಿತ್ವದಲ್ಲಿರುವುದು ಗಮನಾರ್ಹ.

ಶ್ರೀನಿವಾಸ ಮಲ್ಯರ ರಾಜಕೀಯ ಒಲವುಗಳಿಗೆ, ಬಹುಮುಖ್ಯ ಪ್ರೇರಣೆಯೊಂದನ್ನು ಗುರುತಿಸಬಹುದಾದರೆ, ಯುವಕನಾಗಿರುವಾಗಲೇ ತನ್ನ ಸಹೋದರ ಡಾ. ಪದ್ಮನಾಭ ಮಲ್ಯರವರ ಜೊತೆ ಕಾಂಗ್ರೆಸ್ಸಿನ ಸಭೆ ಸಮಾರಂಭಗಳಿಗೆ ಹೋಗುತ್ತಿದ್ದರೆಂದು ಹೇಳಲಾಗಿದೆ, ಇಂದಿನ ಜನನಾಯಕರಂತೆ ಶ್ರೀನಿವಾಸ ಮಲ್ಯರಲ್ಲಿ ಸ್ವಾರ್ಥ ರಾಜಕಾರಣವೊಂದು ಹುಟ್ಟಿರಲಿಲ್ಲ. ಪ್ರಚಾರ ಹಾಗೂ ಜನಪ್ರಿಯತೆಯು ಶ್ರೀನಿವಾಸ ಮಲ್ಯರ ಮನವನ್ನು ಭಾದಿಸಲಿಲ್ಲ. ಹೀಗೆ ಆರಂಭವಾದ ಶ್ರೀನಿವಾಸ ಮಲ್ಯರ ರಾಜಕೀಯ ಪ್ರವೇಶಿಕೆಯು ಮುಂದೆ ನಿರಂತರವಾಗಿ ನಾಲ್ಕು ದಶಕಗಳ ಕಾಲ ಈ ದೇಶದಲ್ಲಿ ಮುಂದುವರೆಯಿತು.

೧೯೨೦ ರಲ್ಲಿ ಮಹಾತ್ಮಾಗಾಂಧೀಜಿಯವರು ಮಂಗಳೂರಿಗೆ ಬಂದಾಗ ಗಾಂಧೀಜಿಯವರು ಕೈಗೊಂಡ ಹಲವಾರು ಕಾರ್ಯಕ್ರಮಗಳಲ್ಲಿ ಶ್ರೀನಿವಾಸ ಮಲ್ಯರು ಭಾಗವಹಿಸಿದ್ದರು ಎನ್ನುವುದಕ್ಕೆ ದಾಖಲೆಗಳಿವೆ. ಹರಿಜನೋದ್ಧಾರ, ಸ್ವಾತಂತ್ರ್ಯ ಚಳುವಳಿಯಲ್ಲಿ ದೇಶದ ಜನತೆಯು ವಹಿಸಬೇಕಾದ ಪಾತ್ರ, ಅಹಿಂಸಾತ್ಮಕ ಚಳುವಳಿ, ಖಾದಿ, ಚರಕಗಳು ಬಗೆಗಿನ ಸಂದೇಶಗಳು ಇತ್ಯಾದಿಗಳು ಶ್ರೀನಿವಾಸ ಮಲ್ಯರಿಗೆ ಆಳವಾದ ಪ್ರಭಾವವನ್ನು ಬೀರಿದ್ದವು ಎನ್ನಲಾಗಿದೆ[೮].

ಶ್ರೀನಿವಾಸ ಮಲ್ಯರು ಸ್ವಾತಂತ್ರ್ಯ ಚಳುವಳಿಯ ಸ್ವಯಂ ಸೇವಕನಾಗಿ ರೂಪುಗೊಂಡಿರುವುದು ತಮ್ಮ ೧೮ ನೇಯ ವಯಸ್ಸಿನಲ್ಲಿ ಎಂದು ಕೌಟುಂಬಿಕ ಮೂಲಗಳು ತಿಳಿಸುತ್ತವೆ. ಶ್ರೀನಿವಾಸ ಮಲ್ಯರ ವಂಶಸ್ತರಾದ ಜನಾರ್ಧನಪ್ರಭುಗಳನ್ನು ಸಂಶೋದನೆಯ ಸಂದರ್ಶನಕ್ಕಾಗಿ ಸಂಪರ್ಕಿಸಿದಾಗ ತಿಳಿದುಬಂದ ವಿಷಯವೆಂದರೆ ಶ್ರೀನಿವಾಸ ಮಲ್ಯರ ರಾಜಕೀಯ ಪ್ರವೇಶಿಸುವಿಕೆಗೆ ತಂದೆ ತಾಯಿಯರಿಂದ ಯಾವ ಅಡಚಣೆಯೂ ಇರಲಿಲ್ಲ ಹಾಗೂ ಉನ್ನತ ಶಿಕ್ಷಣವನ್ನು ಪೂರೈಸದಿರುವುದಕ್ಕೆ ವಿಷಾದವೂ ಇರಲಿಲ್ಲವೆಂದು ತಿಳಿಸಿದ್ದಾರೆ. ಸ್ವಪ್ರೇರಣೆ ಹಾಗೂ ಸಹೋದರ ಡಾ। ಪದ್ಮನಾಭ ಮಲ್ಯರ ಸಹಕಾರ ಹಾಗೂ ಗಾಂಧೀಜಿಯವರ ತತ್ವಗಳಿಂದಾಗಿ ಮಲ್ಯರು ರಾಜಕೀಯಕ್ಕೆ ಧುಮುಕಿದ್ದಾರೆ ಎನ್ನುವುದು ಜನಾರ್ಧನ ಪ್ರಭುಗಳ ಅಭಿಪ್ರಾಯವಾಗಿದೆ[೯].

## ೩.೫. ಶ್ರೀನಿವಾಸ ಮಲ್ಯರ ಮೇಲೆ ಪ್ರಭಾವ ಬೀರಿದ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು.

ವ್ಯಕ್ತಿಯೊಬ್ಬರ ರಾಜಕೀಯ ಒಲವುಗಳು ಕೇವಲ ಕೌಟುಂಬಿಕ ಪ್ರೋತ್ಸಾಹ ಮತ್ತು ನೆರವುಗಳಿಂದ ಮಾತ್ರ ರೂಪುಗೊಳ್ಳುವಂತದಲ್ಲ. ಅಂದಿನ ಸಂದರ್ಭಗಳಲ್ಲಿ ಶ್ರೀನಿವಾಸ ಮಲ್ಯರ ಮುಂದೆ ಅನೇಕ ಮಾದರಿ ವ್ಯಕ್ತಿತ್ವದ ನಾಯಕರಿದ್ದರು ಎನ್ನುವುದನ್ನು ಗಮನಿಸಬೇಕಾಗಿದೆ. ಮೂವತ್ತರ ದಶಕದಲ್ಲಿ ಮಂಗಳೂರಿನವರೇ ಆದ ದೇಶಭಕ್ತ ಕಾರ್ನಾಡು ಸದಾಶಿವರಾಯರು ಅವರಲ್ಲೊಬ್ಬರು. ರಾಜಕೀಯ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಜೊತೆಗೆ ಕೌಟುಂಬಿಕ ಸಮಸ್ಯೆಗಳನ್ನು ಎದುರಿಸಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹಾಚೇತನವೇ ಕಾರ್ನಾಡರು. ಬಹುತೇಕ ಸಾಮಾಜಿಕ ಮತ್ತು ರಾಜಕೀಯ ಅಭಿಯಾನಗಳಿಗೆ ಕಾರ್ನಾಡರೇ ಸ್ಫೂರ್ತಿ ಶಕ್ತಿ ಎಂದು ತಿಳಿಯುತ್ತದೆ. ಕಂದಾಚಾರವನ್ನು ಕಾರ್ನಾಡರು ವಿರೋಧಿಸಿದ್ದರು ಸ್ವರಾಜ್ಯದ ಕನಸುಗಳು ದೂರವಿದ್ದರೂ, ಆ ಕಾಲದಲ್ಲಿ ಕಾರ್ನಾಡರಂತಹ ನಾಯಕತ್ವವು

ಮಹತ್ವ ಪೂರ್ಣವಾಗಿತ್ತು. ಇಂತಹ ವ್ಯಕ್ತಿತ್ವದಿಂದ ಶ್ರೀನಿವಾಸ ಮಲ್ಯರು ಸ್ಫೂರ್ತಿಯನ್ನು ಪಡೆದಿದ್ದರು ಎಂದರೆ ಅತಿಶಯೋಕ್ತಿಯಾಗಲಾರದು. ಶ್ರೀನಿವಾಸ ಮಲ್ಯರಿಗೆ ರಾಜಕೀಯ ಹೋರಾಟಗಳಿಗೆ ಪ್ರೋತ್ಸಾಹ ನೀಡಿದ್ದವರಲ್ಲಿ ಡಾ। ಆ್ಯನಿ ಬೆಸೆಂಟ್‌ರವರನ್ನು ಗುರುತಿಸ ಬಹುದಾಗಿದೆ. ಈ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರು ಉತ್ಸುಕರಾಗಿ ಪಾಲ್ಗೊಂಡಿರುವುದು ಶ್ರೀನಿವಾಸ ಮಲ್ಯರ ಕಾಲಘಟ್ಟದ ಒಂದು ವಿಶೇಷತೆ. ಸದಾಶಿವರಾಯರ ಪತ್ನಿ ಶಾಂತಾಬಾಯಿ, ಕಮಲಾದೇವಿ ಚಟ್ಟೋಪಾದ್ಯಾಯ ಮುಂದೆ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡ ಮುರ್ಡೇಶ್ವರ ರತ್ನಬಾಯಿ, ಸುಂದರಿಬಾಯಿ, ಕಾಮಾಕ್ಷಿಬಾಯಿ, ಮನೋರಮ ಮಂಜುನಾಥ ನಾಯಕ ಮೊದಲಾದ ಮಹಿಳೆಯರು ಸ್ವಾತಂತ್ರ್ಯ ಹೋರಾಟಕ್ಕೆ ಅದ್ಯತೆಯನ್ನು ನೀಡಿದ್ದರು, ಶ್ರೀನಿವಾಸ ಮಲ್ಯರಿಗೆ ಇವೆಲ್ಲರೂ ಮಾದರಿ ವ್ಯಕ್ತಿತ್ವದವರೇ ಆಗಿದ್ದರು.

ಮಂಗಳೂರಿನ ಮೊದಲ ಸತ್ಯಾಗ್ರಹ ಸಭೆಯಲ್ಲಿ ಕುದ್ಮುಲ್ ರಂಗರಾಯರು ಸಾಮಾಜಿಕ ಸುಧಾರಣಾ ಕಾರ್ಯದ ಮುಂಚೂಣಿಯಲ್ಲಿದ್ದರು. ವಂದೇ ಮಾತರಂ, ಜೈ ಭಾರತ ಮಾತೆ, ಮಾತೃ ಭೂಮಿ, ಮತ್ತು ಶ್ರೀಧರಣಿ ಎಂಬ ಉದ್ಘೋಷಗಳು ಸತ್ಯಾಗ್ರಹದ ಧ್ವನಿಗಳಾಗಿದ್ದವು. ಇಂತಹ ಹಲವರು ಚೇತನಗಳಿಂದ ಮಲ್ಯರ ಮನಸ್ಸು ದೇಶಕ್ಕಾಗಿ ಜೀವಿತವನ್ನೇ ಮುಡಿಪಾಗಿಡುವ ನಿರ್ಧಾರವನ್ನು ಅವರ ಆಪ್ತ ಕುಟುಂಬದ ಸದಸ್ಯರಾದ ನರಹರಿ ಮಲ್ಯರ ಸಂದರ್ಶನ ಭೇಟಿಯಲ್ಲಿ ತಿಳಿಸಿದರು[೧೦].

ಕೆ. ಕೆ ಗಟ್ಟಿ, ಅಮ್ಮೆಂಬಳ ಬಾಳಪ್ಪ ಕಾರ್ನಾಡು ಸದಾಶಿವರಾಯರು ಹಾಗೂ ಇನ್ನಿತರರು ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ನೇಮಿಸಿರುವುದು ಮಲ್ಯರಿಗೆ ಒಂದು ನಿರ್ದಿಷ್ಟ ರಾಜಕೀಯ ಕ್ಷೇತ್ರದಲ್ಲಿ ತೊಡಗಿಸಿಕೊಂಡು ಕಾರ್ಯ ಪ್ರವೃತರಾಗಿಸಲು ಸಾದ್ಯವಾಯಿತು.

### ೩.೬. ಶ್ರೀನಿವಾಸ ಮಲ್ಯರ ರಾಜಕೀಯ ಕ್ರಿಯಾಶೀಲತೆಗಳು

ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ತೊಡಗಿಸಿಕೊಂಡ ಶ್ರೀನಿವಾಸ ಮಲ್ಯರ ರಾಜಕೀಯ ಸಾಧನೆಗಳು ಹಂತಹಂತವಾಗಿ ರೂಪು ಗೊಂಡಂತವುಗಳು. ಈ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮೂಲೆಮೂಲೆಗಳಲ್ಲೂ ಶ್ರೀನಿವಾಸ ಮಲ್ಯರು ಸಂಚರಿಸಿ ಜನಸಾಮಾನ್ಯರ ಆಶೆ ಆಕಾಂಕ್ಷೆಗಳನ್ನು ಮನನ ಮಾಡಿಕೊಂಡಿದ್ದರು. ಜಿಲ್ಲೆಯಲ್ಲಿ ಮುಂದೆ ಮಾಡಬೇಕಾಗಿರುವ ಅಭಿವೃದ್ಧಿಯ ನಕಾಶೆಯೊಂದು ಆಗಲೇ ಅವರ ಮನಸ್ಸಿನಲ್ಲಿ ತಳವೂರಿತ್ತು. ೧೯೩೫ ರಲ್ಲಿ ಅಖಿಲ ಭಾರತ ಕಾಂಗ್ರೆಸ್ಸಿನ ಸುವರ್ಣ ಮಹೋತ್ಸವವನ್ನು ದಕ್ಷಿಣ ಕನ್ನಡ ಜಿಲ್ಲೆಯ ವಿವಿದೆಡೆ ಹಮ್ಮಿಕೊಳ್ಳಲಾಗಿತ್ತು. ಇದೇ ವರ್ಷ ಕರ್ನಾಟಕ ರಾಜಕೀಯ ಪರಿಷತ್ತು ಮಂಗಳೂರಿನಲ್ಲಿ ನಡೆಯಿತು. ಆ ವೇಳೆಗೆ ಕರ್ನಾಟಕ ಪ್ರಾಂತೀಯ ಪರಷತ್ತಿನಿಂದ ಶ್ರೀನಿವಾಸ ಮಲ್ಯರು ಪಾಲ್ಗೊಂಡಿದ್ದರು ಎನ್ನುವುದನ್ನು ಕೆಲವಾರು ದಾಖಲೆಗಳು ಸೂಚಿಸುತ್ತದೆ[೧೧].

ಗಾಂಧೀಜಿಯವರ ವೈಯ್ಯಕ್ತಿಕ ಸತ್ಯಾಗ್ರಹದ ಕರೆಗೆ ಸ್ಪಂದಿಸಿದ ಶ್ರೀನಿವಾಸ ಮಲ್ಯರು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳದ ವೆಂಕಟರಮಣ ದೇವಸ್ಥಾನದ ಮುಂಭಾಗದಲ್ಲಿ ಯುದ್ಧ ವಿರುದ್ಧದ ಘೋಷಣೆಗಳನ್ನು ಕೂಗಿದಾಗ ಬಂಧಿತರಾಗಿದ್ದರು ಎಂಬುದು ತಿಳಿದುಬರುತ್ತದೆ.

ಮುಂದೆ ಶ್ರೀನಿವಾಸ ಮಲ್ಯರು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯಲ್ಲಿ ಒಬ್ಬ ಸದಸ್ಯನಾಗಿ ಚುನಾಯಿತರಾದಾಗ ಅವರ ರಾಜಕೀಯ ಕ್ರಿಯಾಶೀಲತೆಗೆ ಮತ್ತೊಂದು ಚಾಲನೆ ದೊರಕಿತ್ತು. ಈ ಕೇಂದ್ರದ ಚಟುವಟಿಕೆಗಳ ಕಚೇರಿಯು ಹುಬ್ಬಳಿಯಲ್ಲಿತ್ತು ಎನ್ನಲಾಗಿದೆ. ಈ ಸಂದರ್ಭದಲ್ಲಿ ಶ್ರೀನಿವಾಸ ಮಲ್ಯರನ್ನು ಬೆಳಿಸಿದವರು ಕಮಲಾದೇವಿ ಚಟ್ಟೋಪಾದ್ಯಾಯರು ಎನ್ನುವುದನ್ನು ಅಂದಿನ ಜನಪ್ರಿಯ ಪತ್ರಿಕೆಯಾದ 'ನವಯುಗ' ವು ತಿಳಿಸಿದೆ "೧೯೪೬ ರಲ್ಲಿ ಘಟನಾ ಸಮಿತಿಯ ಚುನಾವಣೆಯ ಉಮೆದುವಾರಿಕೆಯ ಪಟ್ಟಿಯಲ್ಲಿ ೪೫ ಮಂದಿ ಕಾಂಗ್ರೆಸಿಗರ ನಾಮಪತ್ರಗಳು ದಾಖಲಾಗಿದ್ದವು. ಆ ಪಟ್ಟಿಯಲ್ಲಿ ಕಮಲದೇವಿಯವರ ಹೆಸರೂ ಸೇರಿತ್ತು. ಆದರೆ ಅವರು ತಮ್ಮ ಹೆಸರನ್ನು ಹಿಂತೆಗೆದುಕೊಳ್ಳುವ ಇಚ್ಚೆಯನ್ನು ಅಂದಿನ ಮದರಾಸು ಪ್ರಾಂತ್ಯದ ರಾಜ್ಯಪಾಲರಾದ ಟಿ. ಪ್ರಕಾಶಮರಿಗೆ ಸೂಚಿಸಿದಾಗ, ಕಾಂಗ್ರೇಸ್ಸಿನ ನಿಯಮದಂತೆ ಪಕ್ಷದ ಹೈ ಕಾಮಂಡರಾಗಿದ್ದ ನೆಹರೂರವರ ಅನುಮತಿ ಪಡೆಯಬೇಕೆಂದೂ, ಬದಲಿಗೆ ಪರ್ಯಾಯ ಹೆಸರೊಂದನ್ನು ಸೂಚಿಸಬೇಕೆಂದು ಕಮಲಾದೇವಿಯವರಿಗೆ ಸೂಚಿಸಲಾಯಿತು. ಆ ಸಂದರ್ಭದಲ್ಲಿ ಶ್ರೀನಿವಾಸ ಮಲ್ಯರ ಹೆಸರನ್ನು ಕಮಲಾದೇವಿಯವರು ಸೂಚಿಸಿದ್ದರು[೧೨]".

ಇದೊಂದು ಶ್ರೀನಿವಾಸ ಮಲ್ಯರ ರಾಜಕೀಯ ಕ್ರಿಯಾಶೀಲತೆಗೆ ಹೊಸದೊಂದು ವೇದಿಕೆಯನ್ನು ನೀಡಿದಂತಾಗಿತ್ತು. ಶ್ರೀನಿವಾಸ ಮಲ್ಯರು ಉನ್ನತ ಸ್ಥಾನಕ್ಕೆ ಏರಲು ಹಾಗೂ ಅಧಿಕಾರ ಶ್ರೇಣಿಯ ವ್ಯವಸ್ಥೆಯಲ್ಲಿ ಮೇಲೇರಲು ಈ ಮೇಲಿನ ಅವಕಾಶವು ಕಾರಣವಾಗಿದೆ ಎಂಬುದನ್ನು ಗಮನಿಸಬೇಕು. ಮುಂದೆ ಶ್ರೀನಿವಾಸ ಮಲ್ಯರು ರೂಪಗೊಂಡಿರುವುದು ರಾಷ್ಟ್ರನಾಯಕರಾಗಿ ಎನ್ನುವುದು ಹಲವು ದಾಖಲೆಗಳಿಂದ ತಿಳಿದುಬರುತ್ತೆ[೧೩].

## ೩.೭. ಶ್ರೀನಿವಾಸ ಮಲ್ಯರು ಮತ್ತು ಉಪ್ಪಿನ ಸತ್ಯಾಗ್ರಹ

೧೯೩೦ ರಲ್ಲಿ ಕಾಂಗ್ರೇಸ್ ಪಕ್ಷವು ಕಾನೂನು ಕಾಯಿದೆ ಭಂಗ ಚಳುವಳಿಯನ್ನು ಆರಂಭಿಸಿತು. ಅದೇ ವರ್ಷ ಗುಜರಾತಿನ ದಂಡಿಯಲ್ಲಿ ಎಪ್ರಿಲ್ ೬ ರಂದು ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹವು ಆರಂಭಗೊಂಡಿತು. ಇದರ ಪರಿಣಾಮದಿಂದಾಗಿ ಕರ್ನಾಟಕ ಕಾಂಗ್ರೇಸ್ ಸಮಿತಿಯು ಎಪ್ರಿಲ್ ೧೩ ರಂದು ಅಂಕೋಲದಲ್ಲಿ ಉಪ್ಪಿನ ಸತ್ಯಾಗ್ರಹವನ್ನು ನಡೆಸಲು ನಿರ್ಧರಿಸಿತು. ದಕ್ಷಿಣ ಕನ್ನಡ ಜಿಲ್ಲೆಯ ವಿವಿಧೆಡೆ ಹಾಗೂ ಮಂಗಳೂರಿನಲ್ಲಿ ಶ್ರೀನಿವಾಸ ಮಲ್ಯರ ನೇತ್ರತ್ವದಲ್ಲಿ ಉಪ್ಪಿನ ಸತ್ಯಾಗ್ರಹವನ್ನು ನಡೆಸಲಾಗಿತ್ತು. ಈ ಸತ್ಯಗ್ರಹದ ಫಲದಿಂದಾಗಿ ಆರು ತಿಂಗಳು ಶ್ರೀನಿವಾಸ ಮಲ್ಯರು ಜೈಲುವಾಸವನ್ನು ಅನುಭವಿಸಿದ್ದರು ಎನ್ನುವುದು ತಿಳಿಯುತ್ತದೆ, ಮುಂದೆ ಕರ್ನಾಟಕ ಪ್ರಾಂತೀಯ ಕಾಂಗ್ರೇಸ್ ಸಮಿತಿಯ

ಕಾರ್ಯದರ್ಶಿಯಾಗಿ, ಹಂಗಾಮಿ ಅಧ್ಯಕ್ಷರಾಗಿ, ಪಕ್ಷಕ್ಕಾಗಿ ದುಡಿದ ಹಲವಾರು ನಿದರ್ಶನಗಳು ಲಭ್ಯ ಹಾಗೂ ಇದನ್ನು ಕುಟುಂಬದ ಸದಸ್ಯರೊಬ್ಬರಾದ ನರಹರಿ ಮಲ್ಯರು ತಿಳಿಸಿರುವರು[೧೪].

ಮುಂದೆ ೧೯೪೨ ರ ಭಾರತ ಸ್ವಾತಂತ್ರ್ಯ ಸಂಗ್ರಾಮವು ಅಂತಿಮ ಘಟ್ಟ ಪ್ರವೇಶಿಸುವ ವೇಳೆಗೆ "ಭಾರತವನ್ನು ಬಿಟ್ಟು ತೊಲಗಿ" ಎಂಬ ಉದ್ಘೋಷದೊಂದಿಗೆ ಚಳುವಳಿಯು ಪ್ರಾರಂಬಿಸಿದಾಗ ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೇಸ್‌ನ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀನಿವಾಸ ಮಲ್ಯರು ಭೂಗತರಾಗಿದ್ದೇ ಕಾಂಗ್ರೇಸ್ಸಿನ ಕಾರ್ಯಕರ್ತರಿಗೆ ಹಾಗೂ ಸತ್ಯಾಗ್ರಹಿಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಸ್ವಾತಂತ್ರ್ಯ ಹೋರಾಟದ ಪ್ರತಿಯೊಂದು ಕಾರ್ಯಕ್ರಮದಲ್ಲಿಯೂ ಶ್ರೀನಿವಾಸ ಮಲ್ಯರು ಸಕ್ರೀಯವಾಗಿ ಭಾಗವಹಿಸುತ್ತಿದ್ದರು ಎಂಬುದನ್ನು ಅವರ ನಿಕಟವರ್ತಿಯಾದ ಜನಾರ್ಧನ ಪ್ರಭುಗಳು ವ್ಯಕ್ತ ಪಡಿಸಿರುವರು[೧೫].

ಶ್ರೀನಿವಾಸ ಮಲ್ಯರು ಭೂಗತರಾಗಿದ್ದರು ಎನ್ನುವ ಸಂದರ್ಭದಲ್ಲಿ ಅವರ ಚಾಣಾಕ್ಷತೆ, ಹಾಗೂ ಚುರುಕು ಬುದ್ಧಿಯನ್ನು ನಿದರ್ಶನವೊಂದು ತಿಳಿಸುತ್ತದೆ, ಒಮ್ಮೆ ಭೂಗತರಾಗಬೇಕಾಗಿದ್ದ ಸಂದರ್ಭದಲ್ಲಿ ಮಾರು ವೇಷಧರಿಸಿ ಮುಂಬಯಿಯಲ್ಲಿ ಸಂಬಂದಿತರಾಗಿದ್ದ ಹಾಗೂ ಬ್ರಿಟೀಷ್ ಸರಕಾರದಲ್ಲಿ ಅಧಿಕಾರಿಯಾಗಿದ್ದ ಅವರ ಮನೆಯಲ್ಲಿ ಶ್ರೀನಿವಾಸ ಮಲ್ಯರು ತಂಗಿದ್ದರು. ಉಚ್ಚ ಸರಕಾರಿ ಅಧಿಕಾರಿಯೆಂದರೆ ಪೋಲಿಸರು ಅವರ ಮನೆಗೆ ತಪಾಸಣೆಗೆ ಬರುವ ಸಂಭವ ಕಡಿಮೆ ತಾನೆ? ಅಲ್ಲದೆ ಮುಂಬಯಿ ಪೋಲಿಸರಿಗೆ ಶ್ರೀನಿವಾಸ ಮಲ್ಯರ ಗುರುತು ಕೂಡ ಇರಲಿಲ್ಲವಲ್ಲಾ. ಆಗ ಶ್ರೀನಿವಾಸ ಮಲ್ಯರು ಅವರ ತುಂಡು ಮೀಸೆಯನ್ನು ಕೂಡ ಬೋಳಿಸಿ ಬಿಟ್ಟಿದ್ದರಂತೆ. ಇವರು ಆ ಮನೆಯಲ್ಲಿದ್ದ ವಿಷಯದಲ್ಲಿ ಗಾಳಿ ಹಿಡಿದು ಪೋಲಿಸರು ಬಂದಿದ್ದರು. ಆಗ ಎದುರಿಗಿದ್ದ ಶ್ರೀನಿವಾಸ ಮಲ್ಯರನ್ನೇ ಮನೆಯ ಯಜಮಾನರು ಎಲ್ಲಿದ್ದಾರೆಂದು ಕೇಳಿದರಂತೆ ಅದಕ್ಕೆ ಮರಾಠಿಯಲ್ಲಿಯೇ "ಅವರು ಸ್ನಾನಕ್ಕೆ ಹೋಗಿದ್ದಾರೆ" 'ಅವರು ಈಗ ಬರುತ್ತಾರೆ' ಎಂದು ಅವರಿಗೆ ಕುಳಿತುಕೊಳ್ಳು ಹೇಳಿ "ಮೀ ಯತೊ" ಎಂದು ಹೊರಗೆ ಅಲ್ಲಿಂದಲೇ ಪಲಾಯನ ಮಾಡಿದ್ದರು ಎಂದು ಶ್ರೀನಿವಾಸ ಮಲ್ಯರ ಕಣ್ಣು ಮುಚ್ಚಾಲೆ ಆಟದ ಬಗ್ಗೆ ಶ್ರೀನಿವಾಸ ಮಲ್ಯರ ಕುಟುಂಬದವರಾದ ನರಹರಿ ಮಲ್ಯ ದಂಪತಿಗಳು ಹೆಮ್ಮೆಯಿಂದ ಮಾತಾಡಿದ್ದರು[೧೬].

## ೩.೮. ಶ್ರೀನಿವಾಸ ಮಲ್ಯ ಮತ್ತು ರಾಷ್ಟ್ರ ರಾಜಕಾರಣ

ರಾಜಕೀಯ ವಲಯದಲ್ಲಿ ಶ್ರೀನಿವಾಸ ಮಲ್ಯರು ತಮ್ಮ ವರ್ಚಸ್ಸನ್ನು ಭದ್ರವಾಗಿ ನೆಲೆಯೂರಿಸಿದ ನಂತರ ಭಾರತವು ಸ್ವತಂತ್ರವಾಗುವ ಹಂತದಲ್ಲಿ ಅಂದರೆ ೧೯೪೬ ರಲ್ಲಿ ರಚಿಸಲ್ಪಟ್ಟ ನಡುಗಾಲ ಸರಕಾರದ ಉದಯ ಸಂವಿಧಾನ ರಚನಾ ಮಂಡಳಿಯ ಸದಸ್ಯರಾಗಿ ಕಾಂಗ್ರೇಸ್ ವರಿಷ್ಠರಿಂದ ಶ್ರೀನಿವಾಸ ಮಲ್ಯರು ನೇಮಕಗೊಂಡಿರುವುದು ಅವರ

ತಿಳುವಳಿಕೆ, ನಾಯಕತ್ವದ ಶ್ರೇಷ್ಟತೆ ದೂರದರ್ಶಿತ್ವ ಮತ್ತು ರಾಷ್ಟ್ರ ನಾಯಕರ ಜತೆಗಿದ್ದ ನಿಕಟ ಸಂಪರ್ಕಗಳನ್ನು ಸಾಕ್ಷೀಕರಿಸುತ್ತದೆ.

ಸ್ವಾತಂತ್ರ್ಯ ಸಿಕ್ಕಿದ ನಂತರ ಈ ದೇಶವು ಪಜಾಪ್ರಭುತ್ವ ದೇಶವೆಂದು ಪರಿಗಣಿಸಲ್ಪಟ್ಟಿದೆ. ಪ್ರಜಾಪ್ರಭುತ್ವವನ್ನು ಗುರುತಿಸುವುದು ಪ್ರಮುಖವಾಗಿ ಚುನಾವಣೆಗಳ ಮೂಲಕವೇ ಎನ್ನುವುದನ್ನು ರಾಜ್ಯಶಾಸ್ತ್ರ ಅಧ್ಯಯನಗಳು ಸ್ಪಷ್ಟೀಕರಿಸುತ್ತವೆ.

೧೯೫೨ ರಲ್ಲಿ ಈ ದೇಶದಲ್ಲಿ ಪ್ರಜಾಪ್ರಭುತ್ವಕ್ಕೆ ಸಾಕ್ಷಿಯಾಗಿ, ಮೊದಲ ಸಾರ್ವತಿಕ ಚುನಾವಣೆಯು ಲೋಕ ಸಭೆಗೆ ನಡೆಯಿತು. ಆರಂಭದಲ್ಲಿ ಭಾರತ ಕಾಂಗ್ರೇಸ್ ಪಕ್ಷದ ಅಧ್ಯಕ್ಷರಾಗಿದ್ದ ಪುರುಷೋತ್ತಮ ದಾಸ್ ಟೆಂಡನ್, ಆ ಸ್ಥಾನಕ್ಕೆ ರಾಜಿನಾಮೆಯನ್ನು ನೀಡಿದ್ದ ಕಾರಣ ಪಂಡಿತ್ ನೆಹರೂರವರು ಕಾಂಗ್ರೇಸ್ ಪಕ್ಷದ ಅಧ್ಯಕ್ಷರಾಗಿ ಜವಬ್ದಾರಿಯನ್ನು ಹೊಂದಿದ್ದರು. ನೆಹರೂರವರಿಗೆ ಕೇಂದ್ರ ಮತ್ತು ರಾಜ್ಯಗಳಲ್ಲಿ ಕಾಂಗ್ರೆಸ್ ಪಕ್ಷವನ್ನು ಸಕ್ರೀಯಗೊಳಿಸುವ ಜವಾಬ್ದಾರಿಯನ್ನು ನೀಡಿರುವುದು ಕಂಡು ಬರುತ್ತದೆ. ಆ ಸಂಧರ್ಭದಲ್ಲಿ ಪಕ್ಷದ ಮಹಾಕಾರ್ಯದರ್ಶಿಗಳಾಗಿ ಲಾಲ್ ಬಹದ್ದೂರ್ ಶಾಸ್ತ್ರಿಯವರನ್ನು ಹಾಗೂ ಶ್ರೀನಿವಾಸ ಮಲ್ಯರನ್ನು ಆಯ್ಕೆ ಮಾಡಿರುವುದು ಕಾಂಗ್ರೆಸ್ ಪಕ್ಷದ ಬಲವರ್ಧನೆಯ ಸೂಚ್ಯಕವಾಗಿ ತೋರುತ್ತದೆ.

ಈ ಅವಕಾಶವು ಶ್ರೀನಿವಾಸ ಮಲ್ಯರ ಚಾಣಕ್ಷತೆ ಹಾಗೂ ಸಂಘಟನಾ ಕೌಶಲ್ಯವನ್ನು ಅಭಿವ್ಯಕ್ತ ಪಡಿಸುವುದಕ್ಕೆ ಒಂದು ವೇದಿಕೆಯಾಗಿರುವುದನ್ನು ಗುರುತಿಸ ಬಹುದು. ಅವರು ಕೈಗೊಂಡಿರುವ ಪ್ರಚಾರದಿಂದಾಗಿ ಲೋಕ ಸಭೆ ಮತ್ತು ರಾಜ್ಯ ಸಭೆಗಳ ಚುಣಾವಣೆಯಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರುಗಳು ಆಯ್ಕೆಯಾಗಿರುವುದನ್ನು ಈ ಸಂದರ್ಭದಲ್ಲಿ ಹೇಳಬಹುದಾಗಿದೆ. ಶ್ರೀನಿವಾಸ ಮಲ್ಯರ ಮುಂದೆ ಅತ್ಯಂತ ಕಠಿಣವಾಗಿರುವ ಸವಾಲುಗಳಿದ್ದವು ಎನ್ನುವುದನ್ನು ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ. ಆಯಾ ರಾಜ್ಯಗಳಲ್ಲಿ ಮಂತ್ರಿ ಮಂಡಲವನ್ನು ರಚಿಸುವ ಸೂಕ್ತ ಮುಖ್ಯ ಮಂತ್ರಿಗಳನ್ನು ಆರಿಸುವ ಕಠಿಣ ಜವಾಬ್ದಾರಿಗಳು ಶ್ರೀನಿವಾಸ ಮಲ್ಯರ ಮುಂದಿದ್ದವು. ಅಂತಹ ಆಯ್ಕೆಗಳಿಗಾಗಿ ಶ್ರೀನಿವಾಸ ಮಲ್ಯರು ದೇಶದ ವಿವಿಧ ರಾಜ್ಯಗಳನ್ನು ಸಂದರ್ಶಿಸಿ, ಮುಖ್ಯಮಂತ್ರಿಗಳನ್ನು ಮತ್ತು ಮಂತ್ರಿಮಂಡಲವನ್ನು ನೇಮಿಸಬೇಕಾಗಿತ್ತು. ಇಂತಹ ಜವಾಬ್ದಾರಿಯೊಂದನ್ನು ಸಮರ್ಥವಾಗಿ ನಿಭಾಯಿಸಿ ನೆಹರೂರವರ ಪ್ರಶಂಸೆಗೆ ಪಾತ್ರರಾಗಿದ್ದರು ಎನ್ನುವುದು ಗಮನಾರ್ಹ ೧೯೫೨ರಿಂದ ೬೨ರ ವರೆಗೆ ಒಂದು ದಶಕದ ಕಾಲಘಟ್ಟದಲ್ಲಿ ನಾಲ್ಕು ಬಾರಿ ಲೋಕ ಸಭಾ ಚುನಾವಣೆಗಳು ನಡೆದಿರುತ್ತವೆ. ಶ್ರೀನಿವಾಸ ಮಲ್ಯರು ಸ್ಪರ್ಧಿಸಿದ್ದು ಅಂದಿನ ದಕ್ಷಿಣ ಕನ್ನಡದ ಅವಿಭಾಜ್ಯವಾಗಿದ್ದ ಉಡುಪಿ ಜಿಲ್ಲೆಯಿಂದ ಎನ್ನಲಾಗಿದೆ. ಶ್ರೀನಿವಾಸ ಮಲ್ಯರ ಒಟ್ಟು ಲೋಕಸಭೆಯ ಸದಸ್ಯತ್ವ ಹದಿನೇಳು ವರ್ಷಗಳೆಂದು ದಾಖಲಾಗಿದೆ. ಇದೊಂದು ಅತ್ಯಂತ ಸುಧೀರ್ಘ ಕಾಲಾವಧಿಯಾಗಿದ್ದು ಅವರು ಪಡೆದಿದ್ದ ಜನಮನ್ನಣೆ ಹಾಗೂ ನಾಯಕತ್ವದ ಸಾಮರ್ಥ್ಯವನ್ನು ಸಾಕ್ಷಿಕರಿಸಿದೆ. ಈ ಎಲ್ಲಾ ಸಂದರ್ಭಗಳಲ್ಲಿಯೂ ಅವರು ೬೬ ಕಾಂಗ್ರೆಸ್ ಪಾರ್ಲಿಮೆಂಟರಿ ಪಾರ್ಟಿಯ ಮುಖ್ಯ ಸ್ಥಾನದಲ್ಲಿ ಅವಿರೋಧವಾಗಿ ಆಯ್ಕೆಯಾಗುತ್ತಿದ್ದರು[೧೮].

ಇನ್ನೊಂದು ಪ್ರಮುಖವಾದ ವ್ಯಕ್ತಿ ವಿಶೇಷತೆಯನ್ನು ಅಧ್ಯಯನದ ಹುಡುಕಾಟದಲ್ಲಿ ಕಂಡು ಕೊಳ್ಳಲಾಗಿದೆ, ಅದೇನೆಂದರೆ ಶ್ರೀನಿವಾಸ ಮಲ್ಯರು ಲೋಕಸಭೆಯಲ್ಲಿ ಒಂದೇ ಒಂದು ಮಾತನಾಡಿದವರಲ್ಲ. ಲೋಕಸಭೆಯ ಹಿಂದಿನ ಸಾಲಿನಲ್ಲಿ ಕುಳಿತು ತಮ್ಮ ಪಕ್ಷದ ಹಾಗೂ ವಿರೋಧ ಪಕ್ಷಗಳ ಸದಸ್ಯರುಗಳ ಮನೋದ್ರಷ್ಟಿಗಳನ್ನು, ಕಾರ್ಯವೈಖರಿಗಳನ್ನು ಮಾತುಗಳ ಮೋಡಿಗಳನ್ನು ಚರ್ಚಿಸುವ ವಿಷಯಗಳನ್ನು ಬಹಳಷ್ಟು ಏಕಾಗ್ರತೆಯಿಂದ ಪರೀಕ್ಷೆಗೆ ಒಳ ಪಡಿಸುತ್ತಿದ್ದರು ಎನ್ನುವುದು ತಿಳಿಯುತ್ತದೆ[೯].

ರಾಜಕಾರಣದಲ್ಲಿ ಜವಾಬ್ದಾರಿಯುತ ಕೆಲಸಗಳಿರುತ್ತದೆ. ಮುಖ್ಯ ಮಂತ್ರಿಗಳನ್ನು ಆರಿಸುವುದು, ಮಂತ್ರಿಮಂಡಲದ ರಚನೆ, ಸದಸ್ಯರುಗಳ ನೇಮಕಾತಿ ಇತ್ಯಾದಿಗಳು, ಪಕ್ಷದ ಅಧ್ಯಕ್ಷರ ಮುಂದಿರುವ ಸಾವಲುಗಳಾಗಿವೆ. ಎಂತಹ ರಾಜಕೀಯ ಬಿಕ್ಕಟ್ಟುಗಳು ಎದುರಾಗಲಿ, ಮಲ್ಯರೇ ಪ್ರಧಾನವಾದ ಜವಾಬ್ದಾರಿಯನ್ನು ಎದುರಿಸಿಕೊಂಡು, ರಾಜಕೀಯ ಬಿಕ್ಕಟ್ಟುಗಳನ್ನು ಪರಿಹರಿಸುವ ರಾಜಕೀಯ ಕೌಶಲ್ಯ ಪಡೆದಿರುವುದು ಎನ್ನಲಾಗಿದೆ.

ರಾಷ್ಟ್ರ ರಾಜಕಾರಣದಲ್ಲಿ ಪ್ರಭಾವಶಾಲಿಯಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯ ಬಹುಶಃ ಮೊದಲಿಗರಾಗಿದ್ದ ಶ್ರೀನಿವಾಸ ಮಲ್ಯರು ನೆಹರೂರವರ ನಿಕಟವರ್ತಿಯಾಗಿದ್ದರು ಮತ್ತು ಆ ಸಂದರ್ಭದಲ್ಲಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದರು. ೧೯೫೬ ರಲ್ಲಿ ಪ್ರಥಮ ಬಾರಿಗೆ ಸಮಾಜವಾದಿ ನಾಯಕರಾಗಿದ್ದ ಜಯಪ್ರಕಾಶ ನಾರಯಣರು ಈ ಜಿಲ್ಲೆಗೆ ಬಂದಾಗ ಶ್ರೀನಿವಾಸ ಮಲ್ಯರ ನಾಯಕತ್ವದಲ್ಲಿ ಅವರಿಗೆ ಅಗತ್ಯವಾಗಿದ್ದ ಎಲ್ಲಾ ವ್ಯವಸ್ಥೆಗಳನ್ನು ಮಾಡಲಾಗಿತ್ತು. ಸಮಾಜವಾದಿ ಪಕ್ಷದ ಪ್ರಚಾರಕ್ಕೂ ಶ್ರೀನಿವಾಸ ಮಲ್ಯರು ವೈಯುಕ್ತಿಕ ನೆಲೆಯಿಂದ ಬೆಂಬಲ ನೀಡಿರುವುದು ಕಾಣುತ್ತದೆ.



ದೇಶಕ್ಕೆ ಸ್ವಾತಂತ್ರ್ಯ ಲಭಿಸುವ ಸಂದರ್ಭದಲ್ಲಿ ಘಟನಾ ಸಮಿತಿಯ ಸದಸ್ಯರಾಗಿ ಶ್ರೀನಿವಾಸ ಮಲ್ಯರನ್ನು ನೇಮಿಸಲಾಗಿತ್ತು. ಪಾರ್ಲಿಮೆಂಟಿನ ಯಶಸ್ವಿಗೆ ಶ್ರೀನಿವಾಸ ಮಲ್ಯರ ಕೊಡುಗೆಗಳು ಅಪಾರವಾಗಿದೆ. ಡಬ್ಲಿನಿಗೆ ಹೋಗಿದ್ದ ಪಾರ್ಲಿಮೆಂಟ್ ನಿಯೋಗದಲ್ಲಿ ಶ್ರೀನಿವಾಸ ಮಲ್ಯರು ಒಬ್ಬ ಸದಸ್ಯರಾಗಿದ್ದರು. ಅವರ ನಾಯಕತ್ವದ ಆಯಮಗಳು ಹಲವಾರು ಕಂಡುಬರುತ್ತದೆ. ೧೯೫೦ ರಿಂದ ೧೯೫೨ ರ ವರೆಗಿನ ತಾತ್ಕಾಲಿಕ ಸಂಸತ್ತಿನ ಸದಸ್ಯರಾಗಿದ್ದರು. ಎರಡನೇಯದಾಗಿ ಸ್ವತಂತ್ರ ಭಾರತದಲ್ಲಿ ಪ್ರಬುದ್ಧ ಮತದಾನ ಪದ್ಧತಿಯ ಮೂಲಕ ಪ್ರಥಮ ಪಾರ್ಲಿಮೆಂಟಿಗೆ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದಿಂದ ಸ್ಪರ್ಧಿಸಿ ಗೆಲುವನ್ನು ಸಾಧಿಸಿ, ಮೊದಲ ಲೋಕಸಭೆಯ ಸದಸ್ಯರಾಗಿ ಕಾರ್ಯನಿರ್ವಹಣೆಯನ್ನು ಕೈಗೊಂಡಿರುವುದು ಅವರ ನಾಯಕತ್ವದ ಸಾಧನೆಯಾಗಿದೆ. ಇತರ ಜವಾಬ್ದಾರಿಗಳನ್ನು ಉತ್ಸುಕತೆಯಿಂದ ತೆಗೆದುಕೊಂಡಿರುವುದು ಅವರ ಆತ್ಮವಿಶ್ವಾಸಕ್ಕೆ ಸಾಕ್ಷಿಯಾಗಿದೆ.

- ಪ್ರಥಮ ಲೋಕಸಭೆಯ ಗ್ರಹಸಭೆಯ ಅಧ್ಯಕ್ಷರು
- ಭಾರತ ಕೈಗಾರಿಕಾ ಮಂಡಳಿಯ ಉಪಾಧ್ಯಕ್ಷರು.

ಈ ಮೇಲಿನ ಕ್ಷೇತ್ರಗಳಲ್ಲಿ ಶ್ರೀನಿವಾಸ ಮಲ್ಯರು ನಿಸ್ವಾರ್ಥ ಸೇವಾ ಭಾವವನ್ನು, ಉಜ್ವಲ ದೇಶಾಭಿಮಾನವನ್ನು ಉದಾರ ಜನಪ್ರೇಮವನ್ನು ತೋರಿಸಿ ತಮ್ಮ ರಾಜಕೀಯ ಬದುಕಿನಲ್ಲಿ ಮಾದರಿ ವ್ಯಕ್ತಿತ್ವವನ್ನು ಅಭಿವ್ಯಕ್ತ ಪಡಿಸಿರುವುದು ಕಾಣುತ್ತದೆ. ಇದನ್ನು ಸಮರ್ಥಿಸಿಕೊಳ್ಳುವುದಾದರೆ ಅವರ ಆಪ್ತರಾಗಿದ್ದ ಮುಕುಂದ ಪ್ರಭುಗಳು ಹೇಳಿದಂತೆ ಪಕ್ಷ ಮತ್ತು ಕೇಂದ್ರ ಸರಕಾರದ ಮೇಲೆ ತಮಗಿದ್ದ ಪ್ರಭಾವವನ್ನು ಇತರ ನಾಯಕರ ಸಂಪರ್ಕಗಳನ್ನು ಎಂದಿಗೂ ಶ್ರೀನಿವಾಸ ಮಲ್ಯರು ತಮ್ಮ ಲಾಭಕ್ಕಾಗಿ ಅಥವಾ ಸ್ವಾರ್ಥಕ್ಕಾಗಿ ಬಳಸಿ ಕೊಂಡವರಲ್ಲ[೩೦].

ಶ್ರೀನಿವಾಸ ಮಲ್ಯರ ಒಡನಾಟಗಳೆಲ್ಲವು ರಾಷ್ಟ್ರ ರಾಜಕಾರಣದಲ್ಲಿ ಪಾಲುಗೊಂಡಿದ್ದಾಗ ರಾಜಕೀಯದಲ್ಲಿ ಗಣ್ಯ ಸ್ಥಾನ ಪಡೆದಿದ್ದ ಲಾಲ್‌ಬಹುದ್ದೂರ್ ಶಾಸ್ತ್ರಿ, ಡಾ. ಬಾಬು ರಾಜೇಂದ್ರ ಪ್ರಸಾದ್, ಜಯಪ್ರಕಾಶ ನಾರಾಯಣರಂತಹ ನಾಯಕರ ಸಖ್ಯ ಹೊಂದಿರುವುದು ಕಾಣುತ್ತದೆ. ಈ ಹಿರಿಯ ನಾಯಕರೆಲ್ಲರೂ, ಶ್ರೀನಿವಾಸ ಮಲ್ಯರ ಮೇಲೆ ಪ್ರಭಾವ ಬೀರಿರುವುದು ಕಾಣುತ್ತದೆ. ಪಂಚಾಯತ್‌ರಾಜ್‌ನ ಮಹಾಶಿಲ್ಪಿಯಾಗಿದ್ದ ಬಲವಂತ್ ರಾಯ್ ಮೆಹತ್‌ರವರು ತಮ್ಮ ತರ್ಕಬದ್ಧ ಮಾತು ಹಾಗೂ ಸೂಕ್ಷ್ಮ ಸಂಪರ್ಕ ಚಾಕ ಚಕ್ಯತೆ, ಸಕ್ರೀಯತೆ ಮತ್ತು ಚತುರತೆಯಿಂದ ಶ್ರೀನಿವಾಸ ಮಲ್ಯರೊಂದಿಗೆ ಅಚ್ಚು ಮೆಚ್ಚಿನ ಒಡನಾಡಿಯಾಗಿ ಬೆಳೆದಿರುವುದು ಕಾಣುತ್ತದೆ[೩೧].

ಸಾರ್ವತಿಕ ಚುನಾವಣೆಗಳಲ್ಲಿ ಶ್ರೀನಿವಾಸ ಮಲ್ಯರ ಕಾರ್ಯಚತುರತೆಗಳನ್ನು ಸೂಕ್ಷ್ಮವಾಗಿ ಗಮನಿಸಿದ ನೆಹರೂರವರು ೧೯೪೮ ರಲ್ಲಿ ಪಾರ್ಲಿಮೆಂಟಿನ ಉಪಮುಖ್ಯ ಸಚೇತಕರಾಗಿ ಶ್ರೀನಿವಾಸ ಮಲ್ಯರನ್ನು ನೇಮಕಗೊಳಿಸಿರುವುದು ಕಾಣುತ್ತದೆ. ಪಂಡಿತ್ ನೆಹರೂರವರ ಭಾಷಾ ಕಾನೂನಿನಲ್ಲಿ ಸಹಕರಿಸಿ ಅವರ ಪ್ರಶಂಸೆಗಳನ್ನು ಪಡೆದಿರುವುದು ಕಾಣುತ್ತದೆ.

ಭಾರತದಂತಹ ಬ್ರಹತ್ ಪ್ರಜಾಪ್ರಭುತ್ವದಲ್ಲಿ ಅಲ್ಪ ಜನಸಂಖ್ಯೆ ಇರುವ ಸಮುದಾಯದಿಂದ ಜಾತಿ ಬೆಂಬಲ ಪಡೆದು ರಾಜಕಾರಣ ಪ್ರವೇಶಿಸುವುದು ಬಹಳ ಪ್ರಯಾಸದ ವಿಷಯವೆಂದರೆ ತಪ್ಪಾಗಲಾರದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೌಡಸಾರಸ್ವತ, ಕೊಂಕಣಿ ಜನಾಂಗದವರ ಸಂಖ್ಯೆ ಕಡಿಮೆ ಇದೆ. ಸಂಶೋಧನಾ ಅಧ್ಯಯನದಲ್ಲಿ ಕಂಡುಕೊಂಡ ಸತ್ಯವೆಂದರೆ, ಶ್ರೀನಿವಾಸ ಮಲ್ಯರ ಗಣನೀಯ ರಾಜಕೀಯ ಯಶಸ್ವಿಗೆ ಕಾರಣಗಳು. ಜಾತಿ ಅಥವಾ ಭಾಷೆಯ ಬೆಂಬಲವಲ್ಲ. ಜನ ಸಾಮಾನ್ಯರೊಡನೆ ಮಾನವತೆಯಿಂದ ಹಾಗೂ ನಿರಂತರ ಸಂಪರ್ಕದಿಂದ ಶ್ರೀನಿವಾಸ ಮಲ್ಯರು ನಡೆದುಕೊಂಡಿದ್ದ ರೀತಿ ನೀತಿಗಳು ಕಾರಣಗಳಾಗಿವೆ. ಇಂದಿನ ರಾಜಕಾರಣದಲ್ಲಿ ಕಾಣಬರುವ ಜಾತಿ, ಹಣ, ಧರ್ಮ, ಪಕ್ಷಭೇದಗಳು ಇತ್ಯಾದಿಗಳೆಲ್ಲವನ್ನೂ ಮೀರಿ ಬೆಳೆದ ರಾಜಕಾರಣಿ ಶ್ರೀನಿವಾಸ ಮಲ್ಯರು. ಅವರ ಶ್ರೇಷ್ಠ ವ್ಯಕ್ತಿತ್ವ, ಪ್ರೀತಿ ನಂಬಿಕೆ ಆಧಾರಗಳು ಸತತವಾಗಿ ಅವರು ಪಾರ್ಲಿಮೆಂಟಿಗೆ ಆರಿಸಿ ಬರಲು ಕಾರಣವಾಗಿದೆ. ಈ ಹಿನ್ನಲೆಯಿಂದ ಹೇಳಬಹುದಾದರೆ, ಇಂದಿನ ರಾಜಕಾರಣ ಹಾಗೂ, ಜನನಾಯಕರಿಗೆ ಶ್ರೀನಿವಾಸ ಮಲ್ಯರ ರಾಜಕೀಯ ಆದರ್ಶಗಳು ಹಾಗೂ ಪರಿಶುದ್ಧ ಕ್ರಿಯಾಶೀಲತೆಗಳು ಮಾದರಿಯಾಗಬಲ್ಲವು ಎಂದರೆ ಅತಶಯೋಕ್ತಿಯಾಗಲಾರದು. ಒಂದು ಪ್ರಜಾಪ್ರಭುತ್ವದಲ್ಲಿ ಜನನಾಯಕ ನೆಂದ ಮೇಲೆ ಸಾಮಾನ್ಯ ವ್ಯಕ್ತಿಗಳು ತಮ್ಮ ಸಮಸ್ಯೆಗಳನ್ನು ಅಹವಾಲುಗಳನ್ನು ಬಗೆಗಹರಿಸಬೇಕೆಂದು ಕೇಳಿಕೊಳ್ಳುವುದು ಸರ್ವೆ ಸಾಮಾನ್ಯವಾಗಿದೆ. ಜನ ಸಾಮಾನ್ಯರ ಸಮಸ್ಯೆಗಳಿಗೆ ಸ್ಪಂದಿಸುವುದಕ್ಕಾಗಿ ಶ್ರೀನಿವಾಸ ಮಲ್ಯರು ಕೆಲವು ಸಮಯವನ್ನು ಮೀಸಲಾಗಿ ಇಡುತ್ತಿದ್ದುದು ಕಾಣುತ್ತದೆ. ಭ್ರಷ್ಟಾಚಾರಿಕೆಯ ಹಾಗೂ ಹಣಗಳಿಸುವ ದುರಾಸೆಯು ಅವರಿಗಿರಲಿಲ್ಲವಾದುದರಿಂದ ಮಹಾತ್ಮಾಗಾಂಧಿಯವರಂತೆಯೇ ಶ್ರೀನಿವಾಸ ಮಲ್ಯರು ಪರಿಶುದ್ಧ ರಾಜಕಾರಣಿಯಾಗಿದ್ದರು ಎಂದು ಈ ಅಧ್ಯಯನದ ಮೂಲಕ ಸಾಬೀತು ಪಡಿಸಬಹುದಾಗಿದೆ.



ಮುಂದೆ ಶ್ರೀನಿವಾಸ ಮಲ್ಯರ ರಾಜಕೀಯ ಕ್ರಿಯಾಶೀಲತೆಯನ್ನು ಪರಿಶೀಲಿಸುತ್ತಾ ಹೋದಂತೆ ಅವರು ಸಾಧನೆಯ ಶಿಲ್ಪಿಯಾಗಿಯೇ ಗೋಚರಿಸುತ್ತಾರೆ. ಈ ದೇಶವು ಲೆಕ್ಕವಿಲ್ಲದಷ್ಟು ರಾಜಕಾರಣಿಗಳನ್ನು ಸ್ವಾತಂತ್ರ್ಯದ ನಂತರ ಕಂಡಿದೆ. ಆದರೆ ಜನೋಪಯೊಗಿಯಾಗಿ ಕಾರ್ಯನಿರ್ವಹಿಸಿ ಒಟ್ಟು ದೇಶದ ಪ್ರಗತಿಗಾಗಿ ದುಡಿಯುವವರು ಕೆಲವರಷ್ಟೆ. ಈಗಿನ ಚುನಾವಣಾ ಪ್ರಕ್ರಿಯೆಗಳನ್ನು ಪರಿಶೀಲಿಸಿದರೆ, ವಿವಿಧ ರಾಜಕೀಯ ಪಕ್ಷದ ಮುಖಂಡರು ಚುನಾವಣೆಯ ಸಂದರ್ಭದಲ್ಲಿ ಜನರ ಮನೆಬಾಗಿಲಿಗೆ ಬಂದು ಮತವನ್ನು ಯಾಚಿಸುತ್ತಾರೆ. ಆ ನಂತರ ಜನರ ಹಿತದೃಷ್ಟಿಗಾಗಿ ಹಾಗೂ ಒಟ್ಟು ಸಮುದಾಯದ ಪ್ರಗತಿಗಾಗಿ ದುಡಿಯುವ ರಾಜಕಾರಣಿಗಳು ಕಡಿಮೆ. ಆದರೆ ಶ್ರೀನಿವಾಸ ಮಲ್ಯರು ಇಂತಹ ಗುಂಪಿಗೆ ಸೇರಿದ ರಾಜಕಾರಣಿಯಾಗಿರಲಿಲ್ಲ. ಅವರು ಪೊಳ್ಳು ಆಶ್ವಾಸನೆಗಳನ್ನು ನೀಡಿ ಲಕ್ಷಗಟ್ಟಲೆ ಹಣವನ್ನು ವ್ಯಯಿಸಿ ಜನಪ್ರತಿನಿಧಿಯಾಗಿ ಬಂದವರಲ್ಲ. ಸಮಾಜಘಾತುಕ ಶಿಷ್ಯರನ್ನು ಪೋಷಿಸಿದವರಲ್ಲ. ಶ್ರೀನಿವಾಸ ಮಲ್ಯರು ಜನರ ನಿರೀಕ್ಷೆಗೂ ಮೀರಿ ಅವರ ಅಶೋತ್ತರಗಳಿಗೆ ಸ್ಪಂದಿಸಿದವರು. ಮುಂದೆ ರಾಜಕೀಯವನ್ನು ವೃತ್ತಿಯನ್ನಾಗಿ ಬಯಸುವ ಯುವ ಪೀಳಿಗೆಗೂ ಶ್ರೀನಿವಾಸ ಮಲ್ಯರ ಅಸಾಧಾರಣ ವ್ಯಕ್ತಿತ್ವವು ಮಾದರಿಯಾಗುತ್ತದೆ.



ಉಡುಪಿಯಿಂದ ಸಂಸತ್ತ್ ಸದಸ್ಯರಾಗಿ ಮೂರುಭಾರಿ ರಾಷ್ಟ್ರ ರಾಜಕಾರಣವನ್ನು ಪ್ರವೇಶಿಸಿದ ಶ್ರೀನಿವಾಸ ಮಲ್ಯರು ಎರಡು ದಶಕಗಳ ಕಾಲ ತಮ್ಮ ನಾಯಕತ್ವದ ಶ್ರೇಷ್ಟತೆಯನ್ನು ಮೆರೆದರು. ಆ ಸಂದರ್ಭದಲ್ಲಿ ಕಂಡು ಬರುವ ಇನ್ನೊಂದು ಮಹತ್ವಪೂರ್ಣ ಅಂಶವೆಂದರೆ ಸಂಸತ್ತಿನ ಹಣಕಾಸಿನ ನಿಧಿಯು ದುರುಪಯೋಗ ಆಗದಂತೆ ನೋಡಿಕೊಂಡಿರುವುದು ಕಾಣುತ್ತದೆ. ಸ್ವಾತಂತ್ರ್ಯ ಸಂದರ್ಭದ ಕಾಲಘಟ್ಟದಲ್ಲಿ ಅತ್ಯಂತ ಜನಪ್ರಿಯವಾಗಿದ್ದ 'ನವ ಭಾರತ'

ದಿನಪತ್ರಿಕೆಯ ಸಂಪಾದಕರಾಗಿದ್ದ ವಿ.ಎಸ್ ಕುಡ್ವರು ಶ್ರೀನಿವಾಸ ಮಲ್ಯರ, ಸಕ್ರೀಯ ಕೆಲಸಗಳನ್ನು ಗಮನಿಸಿದವರಾಗಿದ್ದರು. ಆ ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದ ಉಳ್ಳಾಲದ ಬಿ.ಎಮ್ ಇದಿನಬ್ಬನವರು ತಮ್ಮ ಅನಿಸಿಕೆಯನ್ನು ಹಂಚಿಕೊಳ್ಳುವುದು ಹೀಗೆ 'ಶ್ರೀನಿವಾಸ ಮಲ್ಯರಿಗೆ ಕಾಂಗ್ರೆಸ್ ಪಕ್ಷದ ಬಗ್ಗೆ ಅತೀವವಾದ ಪ್ರೀತಿ ಇತ್ತು. ಪಕ್ಷದ ಬೆಳವಣಿಗೆಯ ಕುರಿತಂತೆ ಹೆಚ್ಚು ಲೇಖನಗಳನ್ನು ಬರೆಯಿರಿ ಎಂದು ನನಗೆ ತಿಳಿಸುತ್ತಿದ್ದರು. ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದ ಲೇಖನಗಳನ್ನು ಚರ್ಚಿಸಲು ಅನೇಕ ಲೇಖಕರು ಅಲ್ಲಿಗೆ ಬರುತ್ತಿದ್ದರು. ಶ್ರೀನಿವಾಸ ಮಲ್ಯರು ಸಹ ತಪ್ಪದೇ ಇಂತಹ ಚರ್ಚೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಭಾಷಣಗಳನ್ನು ಮಾಡಿದಾಗ ಶ್ರೀನಿವಾಸ ಮಲ್ಯರು ಸಮಯಕ್ಕೆ ಸರಿಯಾದ ಭಾಷಣವೆಂದು ಪ್ರಶಂಸಿಸುತ್ತಿದ್ದರು. ಶ್ರೀನಿವಾಸ ಮಲ್ಯರಿಗೆ ಹಿಂದೂ ಮುಸ್ಲಿಂ ಎಂಬ ಕೋಮು ಭಾವನೆಗಳಿರಲಿಲ್ಲ. ಚುನಾವಣೆಯ ಭಾರಿ ಪೈಪೋಟಿಯ ನಡುವೆ ನನ್ನನ್ನು ಭಾಷಣಕ್ಕೆಂದು ಕೇಳಿ ಕೊಂಡಿದ್ದರು. ಭಾಷಣದ ನಂತರ ಹತ್ತಿರಕ್ಕೆ ಕರೆದು ನೀವೊಬ್ಬರೇ ಕಾಂಗ್ರೆಸ್ಸಿನ ಮುಸ್ಲಿಮರಲ್ಲಿ ಭಾಷಣ ಮಾಡುವವರು ನಿಮ್ಮ ಭಾಷಣಗಳು ತುಂಬಾ ಪ್ರಯೋಜನವಾಗಿರುತ್ತದೆ ಹೀಗೆ ಮುಂದುವರಿಸಿ ಎಂಬುದಾಗಿ ಹರಸಿದರು. ಆ ನೆನಪುಗಳು ಇಂದಿಗೂ ನನಗೆ ಹಸಿರಾಗಿ ಉಳಿದಿದೆ[೩೩]'.

೧೯೬೨ ರ ಸಂದರ್ಭದಲ್ಲಿ ಉಡುಪಿ ಕ್ಷೇತ್ರದಿಂದ ಶ್ರೀನಿವಾಸ ಮಲ್ಯರನ್ನು ಕಾಂಗ್ರೆಸ್ ಪಕ್ಷವು ಆಯ್ಕೆ ಮಾಡಿತ್ತು. ವಿಧಾನ ಸಭೆಯ ಚುನಾವಣೆಗಳಲ್ಲಿ ೧೯೬೨ ರವರೆಗೆ ಮುಸ್ಲಿಮರಿಗೆ ಪ್ರಾತಿನಿಧ್ಯ ಇರಲಿಲ್ಲ. ಆಗಿನ ಜಿಲ್ಲೆಯ ಕಾಂಗ್ರೆಸ್ ಮುಖಂಡ, ಹಾಗೂ ಜಿಲ್ಲೆಯ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಕೆ. ಕೆ ಶೆಟ್ಟರು, ಕಾಂಗ್ರೆಸ್ ಸಮಿತಿಯ ಮುಖಂಡರಾಗಿದ್ದ ನಿಜಲಿಂಗಪ್ಪನವರು, ಹಾಗೂ ಮಲ್ಯರ ವತ್ತಾಯದಿಂದಾಗಿ ಮುಸ್ಲಿಮರಿಗೂ ಒಂದು ಸ್ಥಾನ ಸಿಕ್ಕಿತ್ತು. ಇದಕ್ಕೆ ಬಿ.ಎಮ್ ಇದಿನಬ್ಬನವರನ್ನು ಅಭ್ಯರ್ಥಿಯಾಗಿ ಸೂಚಿಸಲಾಗಿತ್ತು. ಶ್ರೀನಿವಾಸ ಮಲ್ಯರು ಉಳ್ಳಾಲ ಕ್ಷೇತ್ರದಲ್ಲಿ ಪ್ರಚಾರಕ್ಕಾಗಿ ಬಂದಿದ್ದರಲ್ಲದೆ ಹಲವು ಜನರಲ್ಲಿ ವಿಚಾರವಿನಿಮಯವನ್ನು ಮಾಡಿಕೊಂಡು ಮುಸ್ಲಿಂ ಅಭ್ಯರ್ಥಿಯ ಯಶಸ್ಸಿಗಾಗಿ ಪ್ರಯತ್ನಿಸಿದರು.

ಇಂತಹ ಸಂದರ್ಭಗಳನ್ನು ಲೋಕಯ್ಯ ಶೆಟ್ಟರು ನೆನಪಿಸಿಕೊಳ್ಳುವುದು ಹೀಗೆ 'ಮಲ್ಯರು ಸೌಮ್ಯವಾಧಿ ಕಾಂಗ್ರೆಸ್ಸಿಗ, ಆದರೆ ಎದುರಾಳಿಯನ್ನು ಸೋಲಿಸಲು ಎಂತಹ ತಂತ್ರಕ್ಕೂ ಅವರು ತಯಾರು, ಕುತಂತ್ರಿಯಂತೆಯೂ, ಮುತ್ಸದ್ದಿಯಂತೆಯೂ, ಏಕಕಾಲದಲ್ಲಿ ಕಾರ್ಯನಿರ್ವಹಿಸಬಲ್ಲ ಜಾಣ ಎನ್ನುತ್ತಾರೆ[೩೩].

ಯಾರೇ ವ್ಯಕ್ತಿ ಒಂದು ಕಾರ್ಯವನ್ನು ಸಾಧಿಸುವಲ್ಲಿ ಶ್ರೀನಿವಾಸ ಮಲ್ಯರ ಸಹಾಯ ಕೋರಿದರೆ ಶ್ರೀನಿವಾಸ ಮಲ್ಯರು ತತ್‌ಕ್ಷಣ ಸ್ಪಂದಿಸುವವರಾಗಿರಲಿಲ್ಲ. ಆ ವ್ಯಕ್ತಿಯ ಪೂರ್ವಾಪರಗಳನ್ನು ಅರಿತೇ ಪ್ರತಿಕ್ರಿಯಿಸುತ್ತಿದ್ದರು. ದೇಶದ ಯಾವ ರಾಜ್ಯದ ಮೂಲೆಯಿಂದಲೇ ಜನರು ಬಂದಿರಲಿ ರಾಜಕೀಯವಾಗಿ ಅವರನ್ನು ವಿಭಜಿಸಿ ಕೊಳ್ಳದೇ ಯುಕ್ತಾಯುಕ್ತತೆಯ ನೆಲೆಯಲ್ಲಿ ನೆರವಾಗುವುದು ಶ್ರೀನಿವಾಸ ಮಲ್ಯರ ವೈಶಿಷ್ಟ್ಯವಾಗಿದೆ ಎನ್ನುವುದು ಅವರ ರಾಜಕೀಯ ಚಟುವಟಿಕೆಯನ್ನು ಪರಿಶೀಲಿಸುವಾಗ ತಿಳಿದು ಬರುತ್ತದೆ.

### ೩.೯. ಮುಕ್ತಾಯ

ಹೀಗೆ ಶ್ರೀನಿವಾಸ ಮಲ್ಯರು ಭಾರತದ ರಾಜಕೀಯದಲ್ಲಿ ನಾಲ್ಕು ದಶಕಗಳ ತನಕ ಅಚಲವಾಗಿ ದುಡಿದಿರುವುದು ಅವರ ಒಂದು ಮಹಾನ್ ಸಾಧನೆ ಎಂದೇ ಹೇಳಬಹುದಾಗಿದೆ ಅವರಿಗೆ ಸರಿಸಾಟಿಯಾಗಿ ಯಾರೂ ಅವರ ಮಟ್ಟನ್ನು ನಿಲುಕುವವರಿಲ್ಲ ಎಂದರೂ ಅತಿಶಯೋಕ್ತಿಯಾಗಲಾರದು. ಯಾಕೆಂದರೆ ಶ್ರೀನಿವಾಸ ಮಲ್ಯರು ರಾಜಕೀಯದಲ್ಲಿ ಅತ್ಯಂತ ಉನ್ನತ ಹುದ್ದೆಯಲ್ಲಿದ್ದರೂ, ತಮ್ಮ ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದವರಲ್ಲಿ ಪ್ರಥಮ ಶ್ರೇಣಿಯಲ್ಲಿರುವವರು ಎಂದರೂ ತಪ್ಪಗಲಾರದು. ಶ್ರೀನಿವಾಸ ಮಲ್ಯರು ಸಮಾಜ ಸ್ಪಂದನದ ರಾಜಕಾರಣಿಯಾಗಿದ್ದರು. ದೇಶದ ಉದ್ದಗಲಗಳಲ್ಲಿ ಜನತೆಯ ಪ್ರೀತಿ ವಿಶ್ವಾಸಗಳಿಸಿದರು. ಅಖಿಲ ಭಾರತ ರಾಜಕಾರಣದಲ್ಲಿ ಗಣ್ಯಸ್ಥಾನ ಪಡೆದರು. ಆ ಸ್ಥಾನದ ಮೂಲಕ ಸಮಾಜದ ಒಳಿತನ್ನು ಸಾಧಿಸುವ ಪ್ರಾಮಾಣಿಕತೆ, ನಿಷ್ಟೆಯನ್ನು ಮೆರೆದರು. ಶ್ರೀನಿವಾಸ ಮಲ್ಯರಿಗೆ ಸಾರ್ವಜನಿಕ ಕೆಲಸಗಳು ಆಗಬೇಕಾದುದು ಬಿಟ್ಟು ಸಮಾಜದ ಹಿತಕ್ಕಾಗಿ, ತನ್ನ ರಾಜಕೀಯ ವರ್ಚಸ್ಸನ್ನು ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಪೂರಕವಾದ ಕಾರ್ಯಕ್ರಮಗಳನ್ನು ಸರಕಾರವು ಸಕಾಲದಲ್ಲಿ ಕೈಗೊಳ್ಳುವಂತೆ ಮಾಡಿದ ಮಹಾನ್ ಚೇತನ ಅವರು. ಶ್ರೀನಿವಾಸ ಮಲ್ಯರ ದೂರದರ್ಶಿತ್ವದಿಂದಾಗಿ, ಇಂದಿನ ದಕ್ಷಿಣ ಕನ್ನಡ ಜಿಲ್ಲೆ ಮುಂದುವರಿದ ಜಿಲ್ಲೆಗಳಲ್ಲಿ ಒಂದಾಗಿರುತ್ತದೆ. ಮುಂದಿನ ಅಧ್ಯಾಯದಲ್ಲಿ ಶ್ರೀನಿವಾಸ ಮಲ್ಯರು ಜಿಲ್ಲೆಯ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ವಲಯದಲ್ಲಿ ಮಾಡಿದ ಸಾಧನೆಗಳನ್ನು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ.

## ಪರಾಮರ್ಶನ, ಹಾಗೂ ಸಂದರ್ಶಕರ ವಿವರಗಳು


೧. ಡಾ. ಕೆ. ಸದಾಶಿವ; 'ಭಾರತದ ಸ್ವಾತಂತ್ರ್ಯ ಹೋರಾಟ ೧೮೫೭-೧೯೬೧, ಪ್ರಿಯದರ್ಶಿನಿ ಪ್ರಕಾಶನ, ರಾಮಕೃಷ್ಣ ನಗರ, ಮೈಸೂರು, ೧೯೯೭, ಪುಟ ೪೧, ೪೮.

೨. ಪ್ರೊ. ಸುರೇಶ್ ರೈ; 'ಭಾರತದ ಸ್ವಾತಂತ್ರ್ಯ ಹೋರಾಟ' ೧೮೮೫-೧೯೬೪, ಉನೈಟೆಡ್ ಪಬ್ಲಿಕೇಷನ್ಸ್, ಮಂಗಳೂರು, ನವೆಂಬರ್ ೨೦೦೮. ಪುಟ-೧, ೨.

೩. ಡಾ. ಕೆ. ಸದಾಶಿವ; 'ಭಾರತದ ಸ್ವಾತಂತ್ರ್ಯ ಹೋರಾಟ' ೧೮೫೭-೧೯೬೧, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು, ೧೯೯೬, ಪುಟ-೧೦೪.

೪. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ ಯು. ಶ್ರೀನಿವಾಸ ಮಲ್ಯ ಶತಾಬ್ದಿ ಸಂಸ್ಕರಣೆ', ಎ. ಕೆ. ಮೊನ್ನಪ್ಪ ಪ್ರಕಾಶನ, ದ.ಕ. ಜಿಲ್ಲೆ, ೨೦೦೩, ಪುಟ-೩೪.

೫. ಡಾ. ಮುಕುಂದ ಪ್ರಭು; 'ಮೊಲಿ-ಕೆನರಾ ೨೦೦೦', ಜಿಲ್ಲಾಧಿಕಾರಿ ಪ್ರಕಾಶನ, ದ.ಕ. ಜಿಲ್ಲೆ, ೨೦೦೦, ಪುಟ ೭೩, ೭೭.

೬. ಕೆ. ಅನಂತ ರಾಮರಾವ್; 'ಸುವರ್ಣ ಕರ್ನಾಟಕ ದರ್ಶನ', ವಿದ್ಯಾ ಪಬ್ಲಿಶಿಂಗ್ ಹೌಸ್, ಕದ್ರಿ, ಮಂಗಳೂರು, ಜನವರಿ ೨೧ ೨೦೦೩, ಪುಟ-೩೧.

೭. ಬಸ್ತಿ ವಾಮನ ಶೆಣೈ; 'ಮೌಲ್ಯಾಧಾರಿತ ರಾಜಕಾರಣಿ-ಉಳ್ಳಾಲ ಶ್ರೀನಿವಾಸ ಮಲ್ಯ, ಕಾಂತಾವರ ಕನ್ನಡ ಸಂಘ, ಉಡುಪಿ ೨೦೦೯, ಪುಟ-೨.

೮. ಅದೇ, ಪುಟ-೨.

೯. ಸಂದರ್ಶನ: ಜನಾರ್ಧನ ಪ್ರಭು; ಪ್ರೀತಿ ಅಪಾರ್ಟ್‌ಮೆಂಟ್ಸ್, ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ-೨೦-೭-೨೦೧೦.

೧೦. ಸಂದರ್ಶನ: ಯು. ನರಹರಿ ಮಲ್ಯ; ಮುಖ್ಯ ಪ್ರಾಣ ದೇವಸ್ಥಾನ ರಸ್ತೆ, ಮಂಗಳೂರು, ದಿನಾಂಕ-೨೦-೭-೨೦೧೦

೧೧. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಯು. ಶ್ರೀನಿವಾಸ ಮಲ್ಯ ಶತಾಬ್ದಿ ಸಂಸ್ಕರಣೆ, ಎ. ಕೆ. ಮೊನ್ನಪ್ಪ ಪ್ರಕಾಶನ, ದ.ಕ. ಜಿಲ್ಲೆ ೨೦೦೩, ಪುಟ ೩೫.

೧೨. 'ನವಯುಗ' ದಿನ ಪತ್ರಿಕೆ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ದಿನಾಂಕ-೧೮೩-೧೯೪೯, ಪುಟ-೭.

೧೩. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಯು. ಶ್ರೀನಿವಾಸ ಮಲ್ಯ ಶತಾಬ್ದಿ ಸಂಸ್ಕರಣೆ, ಎ. ಕೆ. ಮೊನ್ನಪ್ಪ ಪ್ರಕಾಶನ, ದ.ಕ. ಜಿಲ್ಲೆ ೨೦೦೩, ಪುಟ ೩೯, ೩೭.

೧೪. ಸಂದರ್ಶನ: ಯು. ನರಹರಿ ಮಲ್ಯ; ಮುಖ್ಯ ಪ್ರಾಣ ದೇವಸ್ಥಾನ ರಸ್ತೆ, ಮಂಗಳೂರು, ದಿನಾಂಕ-೧೮-೭-೨೦೧೦.

೧೫. ಸಂದರ್ಶನ: ಜನಾರ್ಧನ ಪ್ರಭು; ಪ್ರೀತಿ ಅಪಾರ್ಟ್‌ಮೆಂಟ್ಸ್, ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ-೩೦-೨-೨೦೧೦.

೧೬. ಸಂದರ್ಶನ: ಯು. ನರಹರಿ ಮಲ್ಯ; ಮುಖ್ಯ ಪ್ರಾಣ ದೇವಸ್ಥಾನ ರಸ್ತೆ, ಮಂಗಳೂರು, ದಿನಾಂಕ-೧೭-೭-೨೦೧೦.

೧೭. ಎ. ಸಿ. ಕಪೂರ್; 'ಪ್ರಿನ್ಸಿಪಲ್ಸ್ ಆಫ್ ಪೊಲಿಟಿಕಲ್ ಸಾಯನ್ಸ್, ಎಸ್.ಚಂದ್ ಎಂಡ್ ಕಂಪೆನಿ, ರಾಮನಗರ, ದೆಹಲಿ, ೧೯೯೩, ಪುಟ-೧೩೭.

೧೮. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಯು. ಶ್ರೀನಿವಾಸ ಮಲ್ಯ ಶತಾಬ್ದಿ ಸಂಸ್ಕರಣೆ, ಎ. ಕೆ. ಮೊನ್ನಪ್ಪ ಪ್ರಕಾಶನ, ದ.ಕ. ಜಿಲ್ಲೆ, ೨೦೦೩, ಪುಟ-೩೧.

೧೯. ಅದೇ, ಪುಟ-೩೧, ೩೨.

೨೦. ಸಂದರ್ಶನ: ಎಮ್. ಮುಕುಂದ ಪ್ರಭು, ಬಿಜೈ ನ್ಯೂ ರೋಡ್, ಮಂಗಳೂರು, ದಿನಾಂಕ-೧೨-೭-೨೦೧೦.

೨೧. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಎ. ಕೆ. ಮೊನ್ನಪ್ಪ ಪ್ರಕಾಶನ, ದ.ಕ. ಜಿಲ್ಲೆ, ೨೦೦೩, ಪುಟ-೪೯.

೨೨. ಅದೇ, ಪುಟ-೩೧.

೨೩. ಅದೇ, ಪುಟ-೫೯.

# ಅಧ್ಯಾಯ – ೪

# ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕ, ಸಾಮಾಜಿಕ ಅಭಿವೃದ್ಧಿ ಮತ್ತು ಶ್ರೀನಿವಾಸ ಮಲ್ಯರು

## ೪.೧. ಅಭಿವೃದ್ಧಿ ಕುರಿತಾದ ತಾತ್ವಿಕ ಚಿಂತನೆಗಳು

ಆಧುನಿಕ ಜಗತ್ತಿನ ಬೇರೆಲ್ಲಾ ಸಮಸ್ಯೆಗಳಿಗಿಂತ ಆರ್ಥಿಕ ಅಭಿವೃದ್ಧಿ ಮತ್ತು ಬೆಳವಣಿಗೆಯ ಸಮಸ್ಯೆಗಳು ವಿಶೇಷ ಪ್ರಾಶಸ್ತ್ಯ ಪಡೆದಿವೆ. ಇದರಿಂದಾಗಿ ಈ ಸಮಸ್ಯೆಗಳ ಪರಿಗಣನೆಗಾಗಿಯೇ ಹೊಸದೊಂದು ಜ್ಞಾನ ದೀವಿಗೆ ಉದಯಗೊಂಡಿದೆ. ಈ ಜ್ಞಾನಾಂಗ 'ಅಭಿವೃದ್ಧಿ ಅರ್ಥಶಾಸ್ತ್ರ' ಎಂದು ಜನಮನ್ನಣೆಗಳಿಸಿದ್ದು ಇದು ಅರ್ಥ ವಿಜ್ಞಾನದ ಬಹುಮುಖ್ಯ ಶಾಖೆಯಾಗಿ ಹೊರಹೊಮ್ಮಿದೆ. ಜಗತ್ತಿನಲ್ಲಿಯ ಇತ್ತೀಚಿನ ದಿನಗಳ ಬೆಳವಣಿಗೆಗಳು ಅಭಿವೃದ್ಧಿ ಅರ್ಥಶಾಸ್ತ್ರದ ಅಧ್ಯಯನಕ್ಕೆ ವಿಶೇಷ ಮಹತ್ವ ಕಲ್ಪಿಸಿಕೊಟ್ಟಿದೆ, ವಾಸ್ತವವಾಗಿ ಆರ್ಥಿಕಾಭಿವೃದ್ಧಿಯ ಅಧ್ಯಯನವು ಆರ್ಥಿಕ ಸಿದ್ಧಾಂತದ ಒಂದು ಅವಿಭಾಜ್ಯ ಅಂಗವಾಗಿ ಮಾರ್ಪಟ್ಟಿದೆ ಎನ್ನಬಹುದು. ಆರ್ಥಿಕ ಅಭಿವೃದ್ಧಿ ಎಂಬುದು ಬಡ ರಾಷ್ಟ್ರಗಳು ಮತ್ತು ಶ್ರೀಮಂತ ರಾಷ್ಟ್ರಗಳೆರಡಕ್ಕೂ ಪ್ರಸ್ತುತವೆನಿಸುತ್ತದೆ. ಹಿಂದುಳಿದ ರಾಷ್ಟ್ರಗಳಲ್ಲಿನ ಬಡತನ ಮತ್ತು ಹಿಂದುಳಿದಿರುವಿಕೆಯ ನಿರ್ಮೂಲನೆ ವಿಚಾರವು ಆರ್ಥಿಕ ಸಿದ್ಧಾಂತದ ಅವಿಭಾಜ್ಯ ಅಂಗವಾಗಿ ಮಾರ್ಪಟ್ಟಿದೆ. ಶ್ರೀಮಂತ ರಾಷ್ಟ್ರಗಳದು ಅಭಿವೃದ್ಧಿಯನ್ನು ಮುಂದುವರಿಸಿಕೊಂಡು ಹೋಗಬೇಕಾದ ಸಮಸ್ಯೆಯಾದರೆ ಬಡರಾಷ್ಟ್ರಗಳದು ಅಭಿವೃದ್ಧಿಯ ಪಥವನ್ನು ಪ್ರಾಪ್ತಗೊಳಿಸಿಕೊಂಡು ಅದನ್ನು ತ್ವರಿತಗೊಳಿಸುವುದು ಪ್ರಮುಖ ಸಮಸ್ಯೆಯಾಗಿದೆ. ಜಗತ್ತಿನಲ್ಲಿ ಇಂದು ಕಂಡು ಬರುವ ಬಡತನ, ನಿರುದ್ಯೋಗ, ಆದಾಯ ಅಸಮಾನತೆ, ಜನಸಂಖ್ಯಾ ಸಮಸ್ಯೆ, ಅನಭಿವೃದ್ಧಿಯ ಸಮಸ್ಯೆ, ಪೌಷ್ಠಿಕಾಂಶದ ಕೊರತೆ ಮುಂತಾದ ಅಂಶಗಳು ಆರ್ಥಿಕ ಅಭಿವೃದ್ಧಿಯ ಕುರಿತಾದ ಅಧ್ಯಯನವನ್ನು ಅನಿವಾರ್ಯಗೊಳಿಸಿದೆ, ಹಿಂದುಳಿದ ರಾಷ್ಟ್ರಗಳಲ್ಲಿನ ಬಡತನಕ್ಕೆ ಕಾರಣವಾಗುವ ಅಂಶಗಳನ್ನು ಪರಿಪೂರ್ಣವಾಗಿ ವಿಶ್ಲೇಷಿಸುವುದು ಅಭಿವೃದ್ಧಿ ಅರ್ಥಶಾಸ್ತ್ರದ ಪ್ರಮುಖ ಉದ್ದೇಶವಾಗಿದೆ. ಹಸಿವು, ನೋವು, ನರಳುವಿಕೆ, ಬಡತನ ಮತ್ತು ಅಸಹಾಯಕತೆಗಳಿಗೆ ಕಾರಣವಾಗುವ ಅಂಶಗಳನ್ನು ವಿಶ್ಲೇಷಿಸಿ ಅವುಗಳಿಗೆ ಸೂಕ್ತ ಪರಿಹಾರೋಪಾಯಗಳನ್ನು ಸೂಚಿಸುವುದು ಅಭಿವೃದ್ಧಿ ಅರ್ಥಶಾಸ್ತ್ರದ ಗುರಿಯಾಗಿದೆ[೧].

ಇಂದು ಜಗತ್ತಿನ ಎಲ್ಲಾ ರಾಷ್ಟ್ರಗಳು ಆರ್ಥಿಕ ಅಭಿವೃದ್ಧಿಯ ಪಥದಲ್ಲಿ ಮುನ್ನಡೆಯಲು ಹಾತೊರೆಯುತ್ತಿದೆ. ಆರ್ಥಿಕ ಅಭಿವೃದ್ಧಿಯನ್ನು ಎಲ್ಲಾ ಆರ್ಥಿಕ ಸಂಕಷ್ಟಗಳಿಗೆ ಸಿದ್ಧೌಷದ ಎಂದು ಪರಿಗಣಿಸಲಾಗಿದೆ. ಅಭಿವೃದ್ಧಿಯು ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆಗೆ ಕಾರಣವಾಗುವುದರಿಂದ ಅದು ಅಪೇಕ್ಷಣೀಯ ಎಂದು ಕೆಲ ವಿದ್ವಾಂಸರು

ಅಭಿಪ್ರಾಯತಾಳುತ್ತಾರೆ. ಆರ್ಥಿಕ ಅಭಿವೃದ್ಧಿಯಿಂದ ಸಾಮಾಜಿಕ ಸೇವೆಗಳ ವಿಸ್ತರಣೆಯಾಗುತ್ತದೆ, ಅವುಗಳೆಂದರೆ ಸಾರಿಗೆ ಮತ್ತು ಸಂಪರ್ಕ, ಶಿಕ್ಷಣ, ಆರೋಗ್ಯ, ನೈರ್ಮಲ್ಯ, ಲೋಕಪಯೋಗಿ ಕಾಮಗಾರಿಗಳು, ಮುಂತಾದುವು. ಇದರಿಂದಾಗಿ ಶ್ರಮದ ದಕ್ಷತೆ ಸುಧಾರಿಸುತ್ತದೆ ಹಾಗೂ ಪ್ರಗತಿ ಸಾಧನೆಯಾಗುತ್ತದೆ. ಆರ್ಥಿಕ ಅಭಿವೃದ್ಧಿಯು ನಿರುದ್ಯೋಗ ಮತ್ತು ಬಡತನಗಳ ನಿವಾರಣೆಗೆ ನೆರವಾಗುತ್ತದೆ ಆರ್ಥಿಕ ಅಭಿವೃದ್ಧಿಯಿಂದ ಆದಾಯ ಮತ್ತು ಉತ್ಪಾದನೆ ಹೆಚ್ಚುತ್ತದೆ ಹಾಗೂ ಉದ್ಯೋಗಾವಕಾಶಗಳ ವಿಸ್ತರಣೆಯಾಗುತ್ತದೆ ಇದರಿಂದಾಗಿ ಜನರ ಜೀವನ ಮಟ್ಟ ಸುಧಾರಿಸುತ್ತದೆ ಅವರು ತಮ್ಮ ಹಸಿವು, ದಾರಿದ್ರ್ಯ ಮತ್ತು ನೋವುಗಳನ್ನು ನಿವಾರಿಸಿಕೊಳ್ಳಲು ಸಾಕಷ್ಟು ಆದಾಯ ಪಡೆಯುವುದು ಸಾದ್ಯವಾಗುತ್ತದೆ. ಇಷ್ಟೇ ಅಲ್ಲದೆ ಅವರು ಅನೇಕ ಅತ್ಯಾಧುನಿಕ ಸರಕು ಮತ್ತು ಸೇವೆಗಳನ್ನು ಅನುಬೋಗಿಸುವುದೂ ಸಾದ್ಯವಾಗುತ್ತದೆ ಆರ್ಥಿಕ ಸ್ವಾಲಂಬನೆ ಸಾಧಿಸಬೇಕೆಂದರೆ ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆಗೆ ಚಾಲನೆ ದೊರೆಯಬೇಕಾಗುತ್ತದೆ. ವಿವಿಧ ಕ್ಷೇತ್ರಗಳ ಸರ್ವಾಂಗೀಣ ಅಭಿವೃದ್ಧಿಯ ಮೂಲಕ ರಾಷ್ಟ್ರಗಳು ಸ್ವಾವಲಂಬನೆ ಸಾಧಿಸುವುದು ಆರ್ಥಿಕಾಭಿವೃದ್ಧಿಯಿಂದ ಮಾತ್ರ ಸಾಧ್ಯವಾಗುವುದು. ಆರ್ಥಿಕ ಅಭಿವೃದ್ಧಿಯಿಂದ ಜನರ ಜೀವನ ಮಟ್ಟದಲ್ಲಿ ಸುಧಾರಣೆ ತರುವುದು ಸಾಧ್ಯವಾಗುತ್ತದೆ. ಕೃಷಿ, ಕೈಗಾರಿಕೆ, ಸಾರಿಗೆ, ಸಂಪರ್ಕ, ಗಣಿಗಾರಿಕೆ ಮುಂತಾದ ಎಲ್ಲಾ ಕ್ಷೇತ್ರಗಳ ಸರ್ವಾಂಗೀಣ ಪ್ರಗತಿಗೆ ಆರ್ಥಿಕ ಅಭಿವೃದ್ಧಿಯಿಂದಾಗಿ ಆರ್ಥಿಕ ಸ್ವಾವಲಂಬನೆ ಸಾಧಿಸುವುದು ಸಾಧ್ಯವಾಗುತ್ತದೆ. ಆರ್ಥಿಕಾಭಿವೃದ್ಧಿಯು ಆರ್ಥಿಕ ಮುಗ್ಗಟ್ಟಿನ ನಿವಾರಾಣೆಗೆ ಒಂದು ಪ್ರಬಲ ಅಸ್ತ್ರವಾಗಿದೆ. ಅಭಿವೃದ್ಧಿಯು ಆದಾಯ, ಉತ್ಪನ್ನ, ಉದ್ಯೋಗಾವಕಾಶ, ಕೊಳ್ಳುವಶಕ್ತಿ, ಬೇಡಿಕೆ ಮುಂತಾದ ಚಲಪರಿಮಾಣಗಳ ವೃದ್ಧಿಗೆ ಕಾರಣವಾಗುತ್ತದೆ. ಇದರಿಂದಾಗಿ ಆರ್ಥಿಕ ವ್ಯವಸ್ಥೆಯನ್ನು ಮುಗ್ಗಟ್ಟು ಹಿಂಜರಿತ ಮುಂತಾದ ಆರ್ಥಿಕ ಜಾಡ್ಯಗಳ ಕಪಿಮುಷ್ಟಿಯಿಂದ ಬಿಡುಗಡೆಗೊಳಿಸುವುದು ಸಾಧ್ಯವಾಗುತ್ತದೆ[3].

ಆರ್ಥಿಕ ಅಭಿವೃದ್ಧಿ ಬಹು ಆಯಾಮಗಳ ಪ್ರಕ್ರಿಯೆ. ಅದು ವಿವಿಧ ಸ್ಥರಗಳನ್ನು ಒಳಗೊಂಡಿರುತ್ತದೆ. ವಿಭಿನ್ನ ಕ್ಷೇತ್ರಗಳಲ್ಲಿ ಉಂಟಾಗುವ ಬದಲಾವಣೆಗಳನ್ನು ಅದು ಪರಿಗಣಿಸುತ್ತದೆ. ಆದ್ದರಿಂದ ಆರ್ಥಿಕ ವ್ಯವಸ್ಥೆಯಲ್ಲಿ ಸಂಭವಿಸುವ ಅನೇಕ ವಿಧದ ಬದಲಾವಣೆಗಳನ್ನು ಅಭಿವೃದ್ಧಿ ಎಂದು ಪರಿಗಣಿಸಬಹುದು. ಈ ಬದಲಾವಣೆಗಳು ಕೇವಲ ಆರ್ಥಿಕ ಕ್ಷೇತ್ರಗಳಲ್ಲಿ ಮಾತ್ರ ಸಂಭವಿಸದೆ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ಸಾಂಸ್ಥಿಕ ಕ್ಷೇತ್ರಗಳಿಗೂ ವ್ಯಾಪಿಸಿರುತ್ತದೆ, ಸರಳವಾಗಿ ಹೇಳುವುದಾದರೆ ಆರ್ಥಿಕ ಅಭಿವೃದ್ಧಿ ಎಂದರೆ “ಬಡರಾಷ್ಟ್ರಗಳು ತನ್ನ ಜನ ಸಮುದಾಯಕ್ಕೆ ಉನ್ನತ ಮಟ್ಟದ ನೈಜ್ಯ ತಲಾದಾಯ ಮತ್ತು ಸುಧಾರಿತ ಜೀವನ ಮಟ್ಟವನ್ನು ಸಾಧಿಸುವುದಾಗಿದೆ. ಅಭಿವೃದ್ಧಿ ಎಂಬುದು ಒಂದು ಚಲನಾತ್ಮಕವಾದ ದೀರ್ಘ ಪ್ರಕ್ರಿಯೆಯಾಗಿದೆ. ಈ ಪ್ರಕ್ರಿಯೆಯಲ್ಲಿ ಹಿಂದುಳಿದ ರಾಷ್ಟ್ರಗಳ ಆರ್ಥಿಕ ಸಮಸ್ಯೆಗಳ ನಿವಾರಣೆಗೆ ಪ್ರಾಮಾಣಿಕವಾಗಿ ಪ್ರಯತ್ನಿಸಲಾಗುತ್ತದೆ.

ಆರ್ಥಿಕ ಅಭಿವೃದ್ಧಿಯ ಸಾಧನೆಗೆ ವಿವಿಧ ನೀತಿ ಮತ್ತು ಧೋರಣೆಗಳನ್ನು ಜಾರಿಗೆಗೊಳಿಸಬೇಕಾಗುತ್ತದೆ. ಇಲ್ಲವಾದಲ್ಲಿ ರಾಷ್ಟ್ರದ ಸರ್ವತೋಮುಖ ಏಳಿಗೆ ಸಾಧ್ಯವಾಗುವುದಿಲ್ಲ. ಕೃಷಿ, ಕೈಗಾರಿಗೆ, ಸಾರಿಗೆ, ಹಣಕಾಸು, ವಿದೇಶಿ

ವ್ಯಾಪಾರ, ಬ್ಯಾಂಕಿಗೆ ಮುಂತಾದ ಕ್ಷೇತ್ರಗಳ ಸರ್ವಾಂಗೀಣ ಪ್ರಗತಿಗೆ ಆರ್ಥಿಕ ಅಭಿವೃದ್ಧಿ ನಾಂದಿಯಾಗುತ್ತದೆ. ವಿವಿಧ ಕ್ಷೇತ್ರಗಳ ಸರ್ವಾಂಗೀಣ ಅಭಿವೃದ್ಧಿಯಿಂದಾಗಿ ಆರ್ಥಿಕ ಸ್ವಾವಲಂಬನೆ ಸಾಧಿಸುವುದು ಸಾದ್ಯವಾಗುತ್ತದೆ. ಆರ್ಥಿಕಾಭಿವೃದ್ಧಿಯು ಆರ್ಥಿಕ ಮುಗ್ಗಟ್ಟಿನ ನಿವಾರಣೆಗೆ ಒಂದು ಪ್ರಬಲ ಅಸ್ತ್ರವಾಗಿದೆ. ಅಭಿವೃದ್ಧಿಯು ಅದಾಯ, ಉತ್ಪನ್ನ, ಉದ್ಯೋಗಾವಕಾಶ, ಕೊಳ್ಳುವಶಕ್ತಿ, ಬೇಡಿಕೆ ಮುಂತಾದ ಚಲಪರಿಮಾಣಗಳ ವೃದ್ಧಿಗೆ ಕಾರಣವಾಗುತ್ತದೆ. ಇದರಿಂದಾಗಿ ಆರ್ಥಿಕ ವ್ಯವಸ್ಥೆಯನ್ನು ಮುಗ್ಗಟ್ಟು, ಹಿಂಜರಿತ ಮುಂತಾದ ಆರ್ಥಿಕ ಜಾಡ್ಯಗಳ ಕಪಿಮುಷ್ಟಿಯಿಂದ ಬಿಡುಗಡೆಗೊಳಿಸುವುದು ಸಾಧ್ಯವಾಗುತ್ತದೆ.

ಆರ್ಥಿಕ ಅಭಿವೃದ್ಧಿ ಬಹು ಆಯಾಮಗಳ ಪ್ರಕ್ರಿಯೆ. ಅದು ವಿವಿಧ ಸ್ಥರಗಳನ್ನು ಒಳಗೊಂಡಿರುತ್ತದೆ. ವಿಭಿನ್ನ ಕ್ಷೇತ್ರಗಳಲ್ಲಿ ಉಂಟಾಗುವ ಬದಲಾವಣೆಗಳನ್ನು ಅದು ಪರಿಗಣಿಸುತ್ತದೆ. ಆದ್ದರಿಂದ ಆರ್ಥಿಕ ವ್ಯವಸ್ಥೆಯಲ್ಲಿ ಸಂಭವಿಸುವ ಅನೇಕ ವಿಧದ ಬದಲಾವಣೆಗಳನ್ನು ಅಭಿವೃದ್ಧಿ ಎಂದು ಪರಿಗಣಿಸಬಹುದು. ಈ ಬದಲಾವಣೆಗಳು ಕೇವಲ ಆರ್ಥಿಕ ಕ್ಷೇತ್ರಗಳಲ್ಲಿ ಮಾತ್ರ ಸಂಭವಿಸದೆ ಸಾಮಾಜಿಕ, ರಾಜಕೀಯ, ಸಾಂಸ್ಕ್ರತಿಕ ಮತ್ತು ಸಾಂಸ್ಥಿಕ ಕ್ಷೇತ್ರಗಳಿಗೂ ವ್ಯಾಪಿಸಿರುತ್ತದೆ. ಸರಳವಾಗಿ ಹೇಳುವುದಾದರೆ ಆರ್ಥಿಕ ಅಭಿವೃದ್ಧಿ ಎಂದರೆ "ಬಡರಾಷ್ಟ್ರಗಳು ತನ್ನ ಜನ ಸಮುದಾಯಕ್ಕೆ ಉನ್ನತ ಮಟ್ಟದ ನೈಜ್ಯ ತಲಾದಾಯ ಮತ್ತು ಸುಧಾರಿತ ಜೀವನ ಮಟ್ಟವನ್ನು ಸಾಧಿಸುವುದಾಗಿದೆ. ಅಭಿವೃದ್ಧಿ ಎಂಬುದು ಒಂದು ಚಲನಾತ್ಮಕವಾದ ದೀರ್ಘ ಪ್ರಕ್ರಿಯೆಯಾಗಿದೆ. ಈ ಪ್ರಕ್ರಿಯೆಯಲ್ಲಿ ಹಿಂದುಳಿದ ರಾಷ್ಟ್ರಗಳ ಆರ್ಥಿಕ ಸಮಸ್ಯೆಗಳ ನಿವಾರಣೆಗೆ ಪ್ರಾಮಾಣಿಕವಾಗಿ ಪ್ರಯತ್ನಿಸಲಾಗುತ್ತದೆ.

ಆರ್ಥಿಕ ಅಭಿವೃದ್ಧಿ ಸಾಧನೆಗಾಗಿ ವಿವಿಧ ನೀತಿ ಮತ್ತು ಧೋರಣೆಗಳನ್ನು ಜಾರಿಗೊಳಿಸಬೇಕಾಗುತ್ತದೆ. ಇಲ್ಲವಾದಲ್ಲಿ ರಾಷ್ಟ್ರದ ಸರ್ವತೋಮುಖ ಏಳಿಗೆ ಸಾಧ್ಯವಾಗುವುದಿಲ್ಲ. ಕೃಷಿ, ಕೈಗಾರಿಕೆ, ಸಾರಿಗೆ, ಹಣಕಾಸು, ವಿದೇಶಿ ವ್ಯಾಪಾರ, ಬ್ಯಾಂಕಿಗ್ ಮುಂತಾದ ಕ್ಷೇತ್ರಗಳಿಗೆ ಸರಿಹೊಂದುವಂತಹ ನೀತಿಯನ್ನು ಜಾರಿಗೊಳಿಸುವುದು ಪ್ರತಿಯೊಂದು ರಾಷ್ಟ್ರದ ಜವಾಬ್ದಾರಿಯಾಗಿರುತ್ತದೆ. ಆರ್ಥಿಕ ಅಭಿವೃದ್ಧಿಯ ಅಂತಿಮ ಗುರಿ ಜನಹಿತ ಸಾಧನೆಯಾಗಿದೆ. ಜನಹಿತ ಸಾಧನೆಗಾಗಿ ಯಾವ ಧೋರಣೆಗಳನ್ನು ಅನುಸರಿಸಬೇಕು, ಯಾವ ಕಾರ್ಯಕ್ರಮಗಳನ್ನು ರೂಪಿಸಬೇಕು ಎಂಬ ವಿಚಾರಗಳನ್ನು ಅಭಿವೃದ್ಧಿ ಅರ್ಥಶಾಸ್ತ್ರ ತಿಳಿಯಪಡಿಸುತ್ತದೆ. ಅಭಿವೃದ್ಧಿಯ ಸಾಧನೆಯಲ್ಲಿ ಎದುರಾಗುವ ಎಲ್ಲಾ ತೊಡಕುಗಳನ್ನು ನಿವಾರಿಸಿ, ಆರ್ಥಿಕ ಕಲ್ಯಾಣ ಸಾಧನೆಗೆ ಪ್ರಯತ್ನಸುವ ನಿಟ್ಟಿನಲ್ಲಿ ಅಭಿವೃದ್ಧಿ ಅರ್ಥಶಾಸ್ತ್ರದ ಅರಿವು ಅಗತ್ಯವೆನಿಸುತ್ತದೆ, ಆರ್ಥಿಕ ಸುಧಾರಣೆಯ ಕಾಲದಲ್ಲಿ ನಿರುದ್ಯೋಗ ಮತ್ತು ಬಡತನ ಅಧಿಕಗೊಂಡುದುದರ ಪರಿಣಾಮವಾಗಿ ಅಭಿವೃದ್ಧಿಯ ಪ್ರಾಶಸ್ತ್ಯವನ್ನು ಮಾನವ ಅಭಿವೃದ್ಧಿಯ ವಿಷಯಕ್ಕೆ ನೀಡಲಾಯಿತು, ಅಂತೆಯೇ ಮಾನವ ಅಭಿವೃದ್ಧಿ ಮತ್ತು ಮಾನವನ ಒಳಿತುಗಳೇ ಆರ್ಥಿಕ ಅಭಿವೃದ್ಧಿಯ ಅಂತಿಮ ಗುರಿ ಎಂದು ಸಾರಲಾಯಿತು. ಮಾನವ ಅಭಿವೃದ್ಧಿ ಎಂಬುದು ಒಂದು ವಿಶಾಲಾರ್ಥದ ಪರಿಭಾವನೆಯಾಗಿದೆ. ಅದು ಆರ್ಥಿಕ ಬೆಳವಣಿಗೆಯ ಜೊತೆಗೆ ಆದಾಯ ಹಂಚಿಕೆ, ಮಾನವನ ಮೂಲ ಅವಶ್ಯಕತೆಗಳು, ಬಡ ವರ್ಗದ ಜನರ ಅಗತ್ಯತೆಗಳು ಮುಂತಾದುವನ್ನು

ಒಳಗೊಂಡಿದೆ, ಮಾನವ ಅಭಿವೃದ್ಧಿಗೆ, ಆರ್ಥಿಕ ಅಭಿವೃದ್ಧಿ ತುಂಬಾ ಅವಶ್ಯವಿರುವುದರಿಂದ ಈ ಎರಡೂ ತುಂಬಾ ನಿಕಟ ಸಂಪರ್ಕಹೊಂದಿದೆ.

ಪ್ರೋ ಸೇನ್ ಅವರು "ಮಾನವ ಅಭಿವೃದ್ಧಿ ಮತ್ತು ಮಾನವನ ಒಳಿತುಗಳೇ ಆರ್ಥಿಕಾಭಿವೃದ್ಧಿಯ ಅಂತಿಮ ಗುರಿ ಎಂದು ಸಾರಿದರು, ಅವರ ಚಿಂತನೆಯನ್ನು ವಿಶ್ವ ಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮವು (UNDP) ಅದರ ಮೊಟ್ಟ ಮೊದಲ ಮಾನವ ಅಭಿವೃದ್ಧಿ ವರದಿ (೧೯೯೦) ಯಲ್ಲಿ ಸೇರ್ಪಡೆಗೊಳಿಸಿತು. ಅದು ಮಾನವ ಅಭಿವೃದ್ಧಿಯನ್ನು "ಜನರ ಆಯ್ಕೆಯನ್ನು ವಿಸ್ತರಿಸುವ ಪ್ರಕ್ರಿಯೆ" ಎಂದು ವ್ಯಾಖ್ಯಾನಿಸಿತು. ಮಾನವ ಅಭಿವೃದ್ಧಿ ಪರಿಗಣನೆಯ ಅಭಿವೃದ್ಧಿ ಕಾರ್ಯಕ್ರಮವು ಜನರನ್ನೇ ಕೇಂದ್ರ ಬಿಂದುವಾಗಿರಿಸಬೇಕೆಂದು ಕರೆಕೊಟ್ಟಿತು. ಇದನ್ನು ಗಮನಿಸಿದರೆ ಆರ್ಥಿಕಭಿವೃದ್ಧಿಯು ಜನರು ಸುಧಿರ್ಘ ಆರೋಗ್ಯವಂತ ಜೀವನ ನಡೆಸಲು ಅನುವಾಗುವ ರೀತಿಯಲ್ಲಿ ಜನರ ಸಾಮರ್ಥ್ಯವನ್ನು ಹೆಚ್ಚಿಸುವ ಗುರಿ ಹೊಂದಿರಬೇಕು ಎನ್ನುವುದು ಮನವರಿಕೆಯಾಗುತ್ತದೆ. ಬಡಜನರಿಗೆ ಉತ್ತಮ ಪೌಷ್ಠಿಕ ಆಹಾರ, ಯೋಗ್ಯ ಕುಡಿಯುವ ನೀರು, ಉತ್ತಮ ವೈದ್ಯಕೀಯ ಸೌಲಭ್ಯ, ಜೀವನ ಭದ್ರತೆ ಮುಂತಾದುವನ್ನು ಕಲ್ಪಿಸುವತ್ತ ಆರ್ಥಿಕ ಅಭಿವೃದ್ಧಿ ಗಮನ ಹರಿಸುತ್ತದೆ[೩].

**೪.೨. ದಕ್ಷಿಣ ಕನ್ನಡ ಜಿಲ್ಲೆಗೆ ಶ್ರೀನಿವಾಸ ಮಲ್ಯರ ಆರ್ಥಿಕ ಕೊಡುಗೆಗಳು**

ಆರ್ಥಿಕಾಭಿವೃದ್ಧಿ ಎಂಬುದು ಮನುಷ್ಯ ಪ್ರಯತ್ನದಿಂದ ಆಗಬೇಕಾದ ಒಂದು ನಿರಂತರ ಪ್ರಕ್ರಿಯೆ. ಮಾನವ ಪ್ರಯತ್ನವಿಲ್ಲದೆ ಯಾವುದೇ ತರಹದ ಅಭಿವೃದ್ಧಿ ಕೆಲಸಗಳು ನಡೆಯಲು ಸಾಧ್ಯವಿಲ್ಲವೆಂದುಕೊಳ್ಳಬಹುದಾಗಿದೆ. ಈ ನಿಟ್ಟಿನಲ್ಲಿ ಶ್ರೀನಿವಾಸ ಮಲ್ಯರು ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಬಹಳಷ್ಟು ಕೊಡುಗೆಗಳನ್ನು ನೀಡಿರುವುದು ಕಂಡುಬರುತ್ತದೆ. ಶೈಕ್ಷಣಿಕ ಕ್ಷೇತ್ರವಾಗಲಿ, ಬ್ಯಾಂಕಿಗ್ ಕ್ಷೇತ್ರವಾಗಲಿ, ಅಥವಾ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರವೇ ಆಗಲಿ, ಒಟ್ಟಿನಲ್ಲಿ ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗಾಗಿ ಸತತವಾಗಿ ದುಡಿದಿದ್ದಾರೆ ಎನ್ನುವುದು ಅವರ ವಿವಿಧ ಚಟುವಟಿಕೆಗಳನ್ನು ಪರಿಶೀಲಿಸಿದಾಗ ತಿಳಿಯುತ್ತದೆ. ತನ್ನ ಜೀವಿತ ಕಾಲದಲ್ಲಿ ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಅನುಕೂಲವಾಗುವಂತಹ ಅನೇಕ ಕೆಲಸಗಳನ್ನು ಮಾಡಿರುವುದು ಕಂಡು ಬರುತ್ತದೆ. ಶ್ರೀನಿವಾಸ ಮಲ್ಯರು ರಾಜಕಾರಣೀಯಾಗಿದ್ದು, ತಮ್ಮ ರಾಜಕೀಯ ವರ್ಚಸ್ಸನ್ನು ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಪೂರಕವಾದ ಕಾರ್ಯಕ್ರಮಗಳನ್ನು, ಕೇಂದ್ರದ ಪ್ರಭಾವ ಹಾಗೂ ಅಧಿಕಾರಸ್ಥರೊಂದಿಗಿನ ನಿಕಟ ಸಂಬಂಧಗಳನ್ನು, ಹಾಗೂ ಪ್ರಭಾವಗಳನ್ನು ಬಳಸಿಕೊಂಡು, ಡಿಲ್ಲಿಯಲ್ಲಿದ್ದರೂ. ತಮ್ಮ ಜಿಲ್ಲೆಯ ಅಭಿವೃದ್ಧಿಗಾಗಿ, ಏಳಿಗೆಗಾಗಿ ಮಾಡಿದ ಹಿರಿಮೆ ಇವರದು ಎಂದು ಅವರ ನಿಕಟವರ್ತಿಗಳು ಅಭಿಪ್ರಾಯ ಪಡುತ್ತಾರೆ[೪].

ಶ್ರೀನಿವಾಸ ಮಲ್ಯರು ಜಿಲ್ಲೆಯ ಪ್ರತಿಷ್ಠಿತ ಬ್ಯಾಂಕುಗಳಲ್ಲಿ ಒಂದಾದ ಕೆನರಾ ಬ್ಯಾಂಕಿನ ಆಡಳಿತ ನಿರ್ದೇಶಕರಾಗಿ ತಮ್ಮ ಮೂವತ್ತು ಒಂದು ವರ್ಷದ ಪ್ರಾಯದಲ್ಲಿ ಹತ್ತು ವರ್ಷಗಳ ಕಾಲ ಅಂದರೆ ೧೯೩೩ ರಿಂದ ೧೯೪೩ ರ ವರೆಗೆ

ಸೇವೆ ಸಲ್ಲಿಸಿರುತ್ತಾರೆ. ಮುಂದೆ ೧೯೪೬ ರಲ್ಲಿ ಪುನಃ ನಿರ್ದೇಶಕರಾಗಿ ಬ್ಯಾಂಕಿಗೆ ಸೇರಿಕೊಂಡ ಶ್ರೀನಿವಾಸ ಮಲ್ಯರು ತಮ್ಮ ನಿಧನದ ತನಕ ೧೯೬೫ ರ ವರೆಗೆ ಸತತವಾಗಿ ಒಟ್ಟು ೨೯ ವರ್ಷಗಳ ಕಾಲ ನಿರ್ದೇಶಕರಾಗಿ ಸೇವೆಸಲ್ಲಿಸಿರುವುದು ಗಮನಾರ್ಹ. ಈ ನಡುವೆ ೧೯೪೪೩ ರಿಂದ ೧೯೪೬ ತನಕ ಶೀನಿವಾಸ ಮಲ್ಯರು ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು, ಮುಂದೆ ಲೋಕಸಭೆಯ ಸದಸ್ಯರಾದಾಗ ಕೆನರಾ ಬ್ಯಾಂಕಿಗೆ ೧೯೫೩ ರಲ್ಲಿ ವಿದೇಶಿ ವಿನಿಮಯದ ವ್ಯವಹಾರವನ್ನು ನಡೆಸಲು ಬೇಕಾದ ಪರವಾನಿಗೆಯನ್ನು ಭಾರತೀಯ ರಿಸರ್ವ್‌ಬ್ಯಾಂಕಿನಿಂದ ದೊರಕಿಸಿ ಕೊಡುವುದರಲ್ಲಿ ಪ್ರಮುಖರಾದರು. ಇಂದು ಈ ಬ್ಯಾಂಕು ಅನೇಕ ಜನಪರ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದು ಇಡೀ ರಾಷ್ಟ್ರದ ಗಮನವನ್ನೇ ಸೆಳೆದಿರುವುದು ಕಂಡು ಬರುತ್ತದೆ. ಜಿಲ್ಲೆಯ ಅಭಿವೃದ್ಧಿಗೆ ಅವಶ್ಯಕವಾದ ಆರ್ಥಿಕ ನೆರವನ್ನು ಒದಗಿಸುವುದರಲ್ಲಿ ಕೆನರಾ ಬ್ಯಾಂಕು ಮುಂದಾಗಿದೆ. ಇದರ ಹಿಂದೆ ಶ್ರೀನಿವಾಸ ಮಲ್ಯರು, ಬ್ಯಾಂಕಿನ ನಿರ್ದೇಶಕ ಮಂಡಲಿಯ ಸದಸ್ಯರಾಗಿರುವಾಗ ನೀಡಿದ ಸೂಕ್ತ ಸಲಹೆಗಳಿಂದ ಕೆನರಾ ಬ್ಯಾಂಕು ಜಿಲ್ಲೆಯ ಇತರ ಬ್ಯಾಂಕುಗಳಿಗಿಂತ ಅತೀ ಎತ್ತರಕ್ಕೆ ಏರಿರುವುದು ಗಮನಾರ್ಹ. ೧೯೫೬ ನೇ ನವೆಂಬರ ೧೯ ರಂದು ಬ್ಯಾಂಕು ತನ್ನ ಸುವರ್ಣಜಯಂತಿಯನ್ನು ಆಚರಿಸಿದಾಗ, ಆ ಸಮಾರಂಭದ ಮುತುವರ್ಜಿಯನ್ನು ಶ್ರೀನಿವಾಸ ಮಲ್ಯರೇ ವಹಿಸಿರುವುದನ್ನು ಅವರ ನಿಕಟ ಸಂಬಂಧಿಕರಾದ ಜನಾರ್ಧನ ಪ್ರಭು ಸಂದರ್ಶನದ ನಡೆಸಿದ ಸಮಯದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸಿದರು.




೧೯೪೭ ರಲ್ಲಿ ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಶ್ರೀನಿವಾಸ ಮಲ್ಯರು ಮಾಡಿದ ಸಾಧನೆಗಳಲ್ಲಿ ಪ್ರಮುಖವಾದ್ದು ಕೇರಳ, ಕರ್ನಾಟಕ, ಮಹಾರಾಷ್ಟ್ರ ರಾಜ್ಯಗಳಲ್ಲಿ ಹಾದು ಹೋಗುವ ರಾಷ್ಟ್ರೀಯ ಹೆದ್ದಾರಿ (ರಾಷ್ಟ್ರೀಯ ಹೆದ್ದಾರಿ ೧೭

ಹಾಗೂ ೪೨). ದೇಶದ ಎರಡನೇಯ ಪಂಚವಾರ್ಷಿಕ ಯೋಜನೆಯಲ್ಲಿ, ರಾಷ್ಟ್ರೀಯ ಹೆದ್ದಾರಿಗಳ ನಿರ್ಮಾಣಕ್ಕಾಗಿ ವಿಶೇಷ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿತ್ತು, ಇದರಲ್ಲಿ ಪಶ್ಚಿಮ ಕರಾವಳಿಯ ಹೆದ್ದಾರಿ–ಬೊಂಬಾಯಿ ಯಿಂದ ಕನ್ಯಾಕುಮಾರಿಯವರೆಗೂ ಸೇರಿತ್ತು. ಇದೇ ವೇಳೆ ಮಂಗಳೂರು ನಗರಕ್ಕೆ ಉತ್ತರದಲ್ಲಿದ್ದ ಕೂಳೂರಿನಲ್ಲಿ ಗುರುಪುರ ನದಿಯು ಸಂಚಾರಕ್ಕೆ ಅಡಚಣೆಯನ್ನುಂಡುಮಾಡುತ್ತಿತ್ತು. ಇದನ್ನು ಮನಗಂಡ ಶ್ರೀನಿವಾಸ ಮಲ್ಯರು ರಾಷ್ಟ್ರೀಯ ಹೆದ್ದಾರಿ ಯೋಜನೆಯ ಪ್ರಥಮ ಹಂತದಲ್ಲಿ, ಕೂಳೂರು ಸೇತುವೆಯನ್ನು ಸೇರಿಸಿಕೊಳ್ಳುವ ಪ್ರಯತ್ನ ಮಾಡಿದ ಫಲವಾಗಿ ೧೯೫೫ ರಲ್ಲಿ ಕೂಳೂರು ಸೇತುವೆಯ ನಿರ್ಮಾಣವಾಯಿತು. ಇದರಿಂದ ನಗರವು ಉತ್ತರ ಭಾಗದಲ್ಲಿ ಬೆಳೆಯಲಾರಂಭಿಸಿತು.



ಪಶ್ಚಿಮ ಘಟ್ಟದಲ್ಲಿ ಹುಟ್ಟಿ, ಪಶ್ಚಿಮಕ್ಕೆ ಹರಿದು ಸಮುದ್ರ ಸೇರುವ ಹಲವಾರು ನದಿಗಳು ಜಿಲ್ಲೆಯಲ್ಲಿ ಸುಗಮ ಸಂಚಾರಕ್ಕೆ ಅಡ್ಡಿಯನ್ನುಂಟುಮಾಡಿತ್ತು. ಇನ್ನು ಮಳೆಗಾಲದಲ್ಲಂತೂ ಈ ನದಿಗಳಲ್ಲಿ ನೀರು ತುಂಬಿ ನೆರೆ ಹಾವಳಿಯಿಂದ ಜನರು ತತ್ತರಿಸಿ ಹೋಗುತ್ತಿದ್ದರು. ನೆತ್ತಿಯ ಮೇಲೆ ಸುಡು ಬಿಸಿಲು, ಕೆಳಗೆ ಸುಡುತ್ತಿರುವ ಮರಳಿನ ಮೇಲೆ ಭಾರವಾದ ಮೀನಿನ ಬುಟ್ಟಿಯನ್ನು ಹೊತ್ತುಕೊಂಡು ಸಮುದ್ರ ಕಿನಾರೆಯಿಂದ ಹಳ್ಳಿ ಪಟ್ಟಣಗಳಿಗೆ ಮೀನುಗಾರರು ಮಾರಾಟ ಮಾಡಲು ಹೋಗುತ್ತಿದ್ದ ಪರಿಶ್ರಮವನ್ನು ಕಣ್ಣಾರೆ ಕಂಡ ಶ್ರೀನಿವಾಸ ಮಲ್ಯರು ಆ ಬವಣೆಯಿಂದ ಕಷ್ಟ ಕಾರ್ಪಣ್ಯಗಳಿಂದ ಜನರನ್ನು ಪಾರು ಮಾಡುವಲ್ಲಿ ವಿಶೇಷ ಕಾಳಜಿ ವಹಿಸಿರುವುದು ಕಾಣುತ್ತದೆ. ಐವತ್ತು ವರ್ಷಗಳ ಹಿಂದೆ ಮಂಗಳೂರಿನಿಂದ ಕುಂದಾಪುರಕ್ಕೆ ಪ್ರಯಾಣಿಸಲು ಒಂದುವರೆ ದಿನ ತಗಲುತ್ತಿದ್ದವು. ೧೯೧೪ ರಲ್ಲಿ ಸ್ಥಾಪನೆಯಾದ "ಕೆನರಾ ಪಬ್ಲಿಕ್ ಕನ್ವೇಯನ್ಸ್" ಕಂಪೆನಿಯು ಜಿಲ್ಲೆಯ ಉದ್ದಕ್ಕೂ ಬಸ್ಸುಗಳನ್ನು ಓಡಿಸುತ್ತಿತ್ತು. ಶ್ರೀನಿವಾಸ ಮಲ್ಯರು ೧೯೩೯ ರಿಂದಿ ೧೯೫೧ ರ ತನಕ ಈ ಸಂಸ್ಥೆಯ ನಿರ್ದೇಶಕ ಮಂಡಳೀಯ ಸದಸ್ಯರಾಗಿರುವುದು ತಿಳಿದುಬರುತ್ತದೆ. ಬಸ್ಸುಗಳ ಪ್ರಯಾಣದ ನಂತರವೂ ನದಿ ಮತ್ತು ಕಡವುಗಳನ್ನು ದೋಣಿಯಲ್ಲಿ ದಾಟಿ ಮುಂದಿನ ಪ್ರಯಾಣ ಮಾಡಬೇಕಾಗಿತ್ತು. ಹೀಗೆ ಶ್ರೀನಿವಾಸ ಮಲ್ಯರು ತಮ್ಮ ಪ್ರಭಾವವನ್ನು ಉಪಯೋಗಿಸಿ ಎರಡನೆಯ ಪಂಚವಾರ್ಷಿಕ

ಯೋಜನೆಯಡಿಯಲ್ಲಿ ಮುಂಬಯಿಯಿಂದ, ಕಾರವಾರ, ಕುಮಟಾ, ಮಾರ್ಗವಾಗಿ, ಕುಂದಾಪುರ, ಉಡುಪಿ, ಮಂಗಳೂರು, ಕೇರಳ ರಾಜ್ಯದಿಂದ ಈ ರಾಷ್ಟ್ರೀಯ ಹೆದ್ದಾರಿ ೧೭ (NH) ಹಾದು ಹೋಗುವಂತೆ ಮಾಡುವಲ್ಲಿ ಶ್ರೀನಿವಾಸ ಮಲ್ಯರು ಯಶಸ್ವಿಯಾದರು ಎಂಬುದನ್ನು ಅಧ್ಯಯನದ ಸಂದರ್ಶನದ ಸಮಯದಲ್ಲಿ ಭೇಟಿಯಾದ ಶ್ರೀನಿವಾಸ ಮಲ್ಯರ ಕುಟುಂಬದ ಸದಸ್ಯ ಜನಾರ್ಧನ ಪ್ರಭುಗಳು ವ್ಯಕ್ತಪಡಿಸಿದರು[೬].



ಹೀಗೆ ಶ್ರೀನಿವಾಸ ಮಲ್ಯರು ಜಿಲ್ಲೆಯ ಸಾರಿಗೆಯ ಅಭಿವೃದ್ಧಿಗೆ ದುಡಿದ ರೀತಿ ಅಂದಿನ ದಿನಗಳಲ್ಲಿ ಎಲ್ಲರೂ ಮೆಚ್ಚುವಂತದ್ದಾಗಿತ್ತು ಹಾಗೂ ರಾಷ್ಟ್ರೀಯ ಹೆದ್ದಾರಿ ಯೋಜನೆಯನ್ವಯ ಇಂದು ನಮ್ಮ ಜಿಲ್ಲೆಯ ಕರಾವಳಿಯ ಎಲ್ಲ ಹೊಳೆಗಳಿಗೂ ಸೇತುವೆಯಾಗಿ ನೇರ ಸಂಪರ್ಕ ಏರ್ಪಟ್ಟಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಶ್ರೀನಿವಾಸ ಮಲ್ಯರು ದಕ್ಷಿಣ ಕನ್ನಡ ಜಿಲ್ಲೆಗೆ ನೀಡಿದ ಕೊಡುಗೆಯಿಂದ ಕರಾವಳೀಯ ಜನತೆಯು ಅತೀ ಮುಖ್ಯ ಸಮಸ್ಯೆಯಿಂದ ಪಾರಾಗುವಂತಾಯಿತು ಎಂಬ ಜನಾಭಿಪ್ರಾಯಗಳಿವೆ. ಜೀವಿತಕಾಲದಲ್ಲಿ ಶ್ರೀನಿವಾಸ ಮಲ್ಯರು ಕೈಗೊಂಡ ಹಲವಾರು ಯೋಜನೆಗಳು ಸಂಪೂರ್ಣಗೊಂಡಿದ್ದರೂ, ಉಳ್ಳಾಲದ ನೇತ್ರಾವತಿ ನದಿಗೆ ಸೇತುವೆ ನಿರ್ಮಾಣ ಕೆಲಸವು ಅವರ ನಿಧನ ನಂತರ ೧೯೬೫ ರಲ್ಲಿ ಪೂರ್ಣಗೊಂಡಾಗ ಅಂದಿನ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿಯವರು ಉದ್ಘಾಟಿಸಿದವರು ಎನ್ನುವುದು ಶ್ರೀನಿವಾಸ ಮಲ್ಯರ ಕಾರ್ಯಕ್ಷಮತೆಗೆ ಸಾಕ್ಷಿಯಾಗಿದೆ. ಮುಂದೆ ತೃತೀಯ ಪಂಚವಾರ್ಷಿಕ ಯೋಜನೆಯ ಕಾಲದಲ್ಲಿ ಶ್ರೀನಿವಾಸ ಮಲ್ಯರು ಮಂಗಳೂರು–ಹಾಸನ ರೈಲ್ವೆ ಯೋಜನೆಯನ್ನು ಅನುಷ್ಟಾನಕ್ಕೆ ತಂದಾಗ ಅಂದಿನ ಕೇಂದ್ರ ಸರಕಾರದಲ್ಲಿ ರೈಲ್ವೆ ಮಂತ್ರಿಗಳಾಗಿದ್ದ ಟಿ. ಎ. ಪೈಗಳು ಯೋಜನೆಯನ್ನು ಉದ್ಘಾಟಿಸಿರುವುದು ತಿಳಿದು ಬರುತ್ತದೆ[೭].




ಮುಂದೆ ಶ್ರೀನಿವಾಸ ಮಲ್ಯರು ಜಿಲ್ಲೆಯ ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ಮಾಡಿದ ಮಹತ್ ಸಾಧನೆಯೇ ಬಜ್ಪೆಯ ವಿಮಾನ ನಿಲ್ದಾಣ. ಐವತ್ತರ ದಶಕದಲ್ಲಿ ನಮ್ಮ ದೇಶದಲ್ಲಿ ವಿಮಾನ ಸಾರಿಗೆಯ ವ್ಯವಸ್ಥೆಯು ಕೇವಲ

ಮಹಾನಗರಗಳಿಗೆ ಮಾತ್ರ ಸೀಮಿತವಾಗಿತ್ತು. ದೇಶದ ಪ್ರಮುಖ ವ್ಯಾಪಾರ ಕೇಂದ್ರವಾದ ಬೊಂಬಾಯಿಯೊಂದಿಗೆ ಮಂಗಳೂರು ವ್ಯವಹಾರ ಬೆಳೆಸಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಹೆಚ್ಚಿನ ಜನರು ಬೊಂಬಾಯಿಯಲ್ಲಿ ಉದ್ಯೋಗದಲ್ಲಿದ್ದರು. ಆಗಿನ ಕಾಲದಲ್ಲಿ ಹಡಗು ಸಂಚಾರವಲ್ಲದೆ, ಈ ಎರಡು ನಗರಗಳ ನಡುವೆ ನೇರ ಸಂಚಾರ ವ್ಯವಸ್ಥೆಯಿಲ್ಲದೆ ವ್ಯಾಪಾರ ಸಂಪರ್ಕಗಳಿಗೆ ಬಹಳಷ್ಟು ತೊಂದರೆಗಳು ಆಗುತ್ತಿರುವುದನ್ನು ಗಮನಿಸಿದ ಶ್ರೀನಿವಾಸ ಮಲ್ಯರು ಬಜ್ಪೆಯ ವಿಮಾನ ನಿಲ್ದಾಣದ ಯೋಜನೆಗಾಗಿ ನಿರಂತರ ಪರಿಶ್ರಮ ನಡೆಸಿರುವುದು ಕಾಣುತ್ತದೆ. ದೇಶಕ್ಕೆ ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಜನರು, ಉನ್ನತ ಶಿಕ್ಷಣ, ವೃತ್ತಿಪರ ಶಿಕ್ಷಣ, ಬ್ಯಾಂಕಿಗ್ ವಿಮ ಬಹಳಷ್ಟು ಮುಂದುವರಿಯಲು ಹಾತೊರೆಯುತ್ತಿದ್ದು, ದೇಶ ವಿದೇಶಗಳ ಜನತೆ ಜಿಲ್ಲೆಯ ಬಗ್ಗೆ ಕುತೂಹಲಿಗರಾಗಿದ್ದುದ್ದು, ಹಾಗೂ ಜಿಲ್ಲೆಯೊಂದಿಗೆ ಸಂಪರ್ಕ ಬೆಳೆಸುವ ದಿಶೆಯಲ್ಲಿ, ಮುನ್ನುಗುತ್ತಿದ್ದ ಸಮಯದಲ್ಲಿ, ಆ ಸಂಪರ್ಕ ಮತ್ತಷ್ಟು ಬೆಳೆಯಲಿ, ಮುಂದುವರಿಯಲಿ ಎಂಬ ಆಶಯದಿಂದ, ಶ್ರೀನಿವಾಸ ಮಲ್ಯರು ಸರಕಾರದ ಮೇಲೆ ಒತ್ತಡ ಹೇರಿ, ವಿಮಾನ ನಿಲ್ದಾಣದ ಯೋಜನೆ ಮಂಜುರಾಗುವಲ್ಲಿ ಯಶಸ್ವಿಯಾದರು, ಹೀಗೆ ಶ್ರೀನಿವಾಸ ಮಲ್ಯರ ಪ್ರಯತ್ನದಿಂದಾಗಿ ಮಂಗಳೂರು, ದೇಶದ ನಾಗರಿಕ ವಾಯು ಯಾನದ ನಕಾಶೆಯಲ್ಲಿ ಸ್ಥಾನ ಪಡೆಯುವಂತಾಗಿದೆ ಎನ್ನುವುದು ದಾಖಾಲಾರ್ಹ. ೧೯೫೧ ರಲ್ಲಿ ಬಜ್ಪೆಯಲ್ಲಿ ವಿಮಾನ ನಿಲ್ದಾಣ ಸ್ಥಾಪನೆಯಾಯಿತು. ಕೇವಲ ೨೭ ಜನ ಪ್ರಯಾಣಿಕರನ್ನು ಕೊಂಡೊಯ್ಯುವ ಡಕೋಟಾ ವಿಮಾನವು ಮಂಗಳೂರು ಮತ್ತು ಬೊಂಬಾಯಿ ನಡುವೆ ಹಾರಲಾರಂಬಿಸಿತು. ಇಂದು ಬಜ್ಪೆಯ ವಿಮಾನ ನಿಲ್ದಾಣವು ಅಂತರಾಷ್ಟ್ರೀಯ ವಿಮಾನ ನಿಲ್ದಾಣವಾಗಿ ಅಭಿವೃದ್ಧಿ ಹೊಂದಿ ದೇಶ ವಿದೇಶಗಳೊಂದಿಗೆ ವ್ಯಾಪಾರ ಸಂಪರ್ಕಗಳನ್ನು ಬೆಳೆಸಿಕೊಂಡಿರುವುದು ಗಮನಾರ್ಹ[೪].



(ಬಜ್ಪೆ ವಿಮಾನ ನಿಲ್ದಾಣ)

ಇನ್ನು ಶಿಕ್ಷಣಕ್ಕೂ ಶ್ರೀನಿವಾಸ ಮಲ್ಯರು ನೀಡಿದ ಕೊಡುಗೆಗಳು ಅಪಾರ ೬೦ ರ ದಶಕದಲ್ಲಿ ದೇಶದಲ್ಲಿ ಉನ್ನತ ಶಿಕ್ಷಣಕ್ಕೆ ಪ್ರಾಧಾನ್ಯ ನೀಡಲು ಆರಂಭವಾಗಿತ್ತು. ತಾಂತ್ರಿಕ ಶಿಕ್ಷಣಕ್ಕೆ ಮಹತ್ವವನ್ನು ನೀಡಲು ಸ್ವಾತಂತ್ರ್ಯೋತ್ತರ ಭಾರತ ಆದ್ಯತೆ ನೀಡಬೇಕೆಂಬುದು ಆಗಿನ ಕಾಲದ ಶಿಕ್ಷಣ ತಜ್ಞರ ನಿರ್ಧಾರವಾಗಿತ್ತು. ತಾಂತ್ರಿಕ ಶಿಕ್ಷಣವನ್ನು ದೇಶದ ಎಲ್ಲೆಡೆಗಳಲ್ಲೂ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಒದಗಿಸುವ ಸಲುವಾಗಿ ಕೇಂದ್ರ ಸರಕಾರವು ಪ್ರತೀ ರಾಜ್ಯದಲ್ಲೂ ಉತ್ತಮ ಗುಣಮಟ್ಟದ ರಿಜಿನಲ್ ಇಂಜಿನಿಯರಿಂಗ್ ಕಾಲೇಜುಗಳನ್ನು ಸ್ಥಾಪಿಸುವ ಯೋಜನೆಯನ್ನು ಸಿದ್ಧಪಡಿಸಿ ಇದಕ್ಕಾಗಿ ಕೇಂದ್ರ ಸಂಪುಟದಲ್ಲಿ ಒಂದು ಹೊಸ ಖಾತೆ (ಮಿನಿಸ್ಟ್ರಿ ಫಾರ್ ಸೈಂಟಿಫಿಕ್ ಆಂಡ್ ಕಲ್ಚರ್ರಲ ಆಫೆರ್ಸ್) ಪ್ರಾರಂಭಿಸಿ, ಅದರ ಪ್ರಾಚಾರ್ಯ ಹೂಮಾಯುನ್ ಕಬೀರ್ ಮಂತ್ರಿಯಾಗಿದ್ದರು. ಶ್ರೀನಿವಾಸ ಮಲ್ಯರು ಕಬೀರ್‌ರವರ ಮನವೊಲಿಸಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಪ್ರಾದೇಶಿಕ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆಯಾಗುವಂತೆ ಬಹಳಷ್ಟು ಪ್ರಯತ್ನ ನಡೆಸಿರುವುದು ಕಂಡುಬರುತ್ತದೆ. ಶ್ರೀನಿವಾಸ ಮಲ್ಯರು ಪ್ರಧಾನಿಯವರನ್ನು ಭೇಟಿ ಮಾಡಿ ಕರ್ನಾಟಕದಲ್ಲಿ ಪ್ರಾದೇಶಿಕ ಇಂಜಿನಿಯರಿಂಗ್ ಕಾಲೇಜನ್ನು ತನ್ನ ಕ್ಷೇತ್ರಕ್ಕೆ ನೀಡಬೇಕೆಂದು ಮನವಿ ಸಲ್ಲಿಸಿದಾಗ ಪ್ರಧಾನಿಯವರು ಆ ಬಗ್ಗೆ ಸ್ಥಳದ ಆಯ್ಕೆಗೆ ಸಲಹೆ ನೀಡಿದರು. ಶ್ರೀನಿವಾಸ ಮಲ್ಯರು ತತ್‌ಕ್ಷಣ ಸ್ವಕ್ಷೇತ್ರಕ್ಕೆ ಮರಳಿ ತುರ್ತು ಸಮಿಕ್ಷಾ ಕಾರ್ಯ ನಿರ್ವಹಿಸಿ ಸುರತ್ಕಲ್‌ನಲ್ಲಿ ಆ ಯೋಜನೆಗಳನ್ನು ರೂಪಿಸಿದ ಫಲವಾಗಿ ಸುರತ್ಕಲ್‌ನಲ್ಲಿ ಕೆ.ಆರ್.ಇ.ಸಿ ಅಂದರೆ ಕರ್ನಾಟಕ ರೀಜನಲ್ ಇಂಜಿನಿಯರಿಂಗ್ ಕಾಲೇಜು ೧೯೬೦ ರಲ್ಲಿ ಸ್ಥಾಪನೆಯಾಯಿತು. ಸಹಸ್ರಾರು ಮಂದಿ ಈ ಪ್ರತಿಷ್ಠಿತ ಕಾಲೇಜಿನಿಂದ ಇಂಜಿನಿಯರಿಂಗ್ ಪದವಿ ಪಡೆದು ದೇಶ ವಿದೇಶಗಳಲ್ಲಿ ಉನ್ನತ ಹುದ್ದೆಯಲ್ಲಿರುವುದು ಕಂಡು ಬರುತ್ತದೆ. ಮುಂದೆ ೨೦೦೪ ರಲ್ಲಿ ಈ ಶಿಕ್ಷಣ ಸಂಸ್ಥೆಗೆ ಸ್ವಾಯತ್ತೆ ಕೂಡಾ ಲಭಿಸಿತು. ಕರ್ನಾಟಕ ಪ್ರಾದೇಶಿಕ ಇಂಜಿನಿಯರಿಂಗ್ ಕಾಲೇಜು ಇಂದು ನ್ಯಾಶನಲ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಎಂಬ ಅಭಿದಾನಕ್ಕೆ ಪಾತ್ರವಾಗಿದೆ, ಇಂಜಿನಿಯರಿಂಗ್‌ನಲ್ಲಿ ಸ್ನಾತಕೋತ್ತರ ಪದವಿಗಳಿಗೂ ಈ ಶಿಕ್ಷಣ ಸಂಸ್ಥೆಯಲ್ಲಿ ವ್ಯವಸ್ಥೆ ಇರುವುದು ಕಂಡುಬರುತ್ತದೆ. ಈಗ ಈ ಕಾಲೇಜು ವಿಶ್ವವಿದ್ಯಾಲಯದ ಸ್ಥಾನಮಾನಗಳನ್ನು ಪಡೆಯುವ ಹಂತಕ್ಕೆ ಏರಿದೆ, ಅದರ ಸುತ್ತಲೂ ಬೆಳೆದ ನಗರಕ್ಕೆ "ಶ್ರೀನಿವಾಸ ನಗರ" ಎಂದು ನಾಮಕರಣ ಮಾಡಿರುವುದು, ಹಾಗೂ ಅಂದು ಕಾಲೇಜು ಉದ್ಘಾಟನಾ ಸಮಾರಂಭಕ್ಕೆ ಅಂದಿನ ಪ್ರಧಾನಿ ಲಾಲ್ ಬಹುದ್ದೂರ್ ಶಾಸ್ತ್ರಿಯವರು ಶ್ರೀನಿವಾಸ ಮಲ್ಯರ ಮನವಿಯ ಮೇಲೆ ಜಿಲ್ಲೆಗೆ ಬಂದಿದ್ದರು ಎಂದು ಖ್ಯಾತ ಲೇಖಕ ಹಾಗೂ ವಿಶ್ವ ಕೊಂಕಣಿ ಸಮ್ಮೇಳನದ ಅಧ್ಯಕ್ಷರಾದ ಬಸ್ತಿ ವಾಮನಶೆಣೈಯವರು ಈ ಅಧ್ಯಯನದ ಸಂದರ್ಶನದ ಸಮಯದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು[೪].



(ಕೆ. ಆರ್. ಇ. ಸಿ.)

೧೯೬೨ ರಲ್ಲಿ ಮಂಗಳೂರು ನಗರಕ್ಕೊಂದು ಪುರಭವನ ಬೇಕೆಂದು ಶ್ರೀನಿವಾಸ ಮಲ್ಯರ ಮಹದಾಸೆಯಾಗಿತ್ತು, ಅದನ್ನು ಸಾರ್ವಜನಿಕರಿಗೆ ನೀಡಬೇಕೆಂಬ ಛಲ ಶ್ರೀನಿವಾಸ ಮಲ್ಯರಿಗಿತ್ತು. ಪುರಭವನವು ಸುಂದರವಾಗಿರಬೇಕು, ಮತ್ತು ದೀರ್ಘಕಾಲದ ಬಾಳ್ವಿಕೆಯುಳ್ಳದಾಗಿರಬೇಕೆಂದು ಹಠ ಹಿಡಿದ ಶ್ರೀನಿವಾಸ ಮಲ್ಯರು ಅಂತಹ ಮಾದರಿ ಪುರಭವನದ ನಿರ್ಮಾಣ ಕಾರ್ಯವನ್ನು ಅಂತಾರಾಷ್ಟ್ರೀಯ ಖ್ಯಾತಿಯ "ಗ್ಯಾನನ್ ಡಂಕರ್ಲಿ" ಎಂಬ ಕಂಪನಿಗೆ ವಹಿಸಿಕೊಟ್ಟರು ಹಾಗೂ ಅವರು ಆಶಿಸಿದಂತೆ ಕೊನೆಗೂ ದಕ್ಷಿಣ ಕನ್ನಡ ಜಿಲ್ಲೆಗೆ ಒಂದು ಸುಂದರವಾದ ಪುರಭವನ ಲಭಿಸುವಂತಾಯಿತು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೈಗಾರಿಕೆಗಳ ಸ್ಥಾಪನೆಯಾಗಬೇಕು ಇದರಿಂದ ಜಿಲ್ಲೆಯಲ್ಲಿ ಬಹಳಷ್ಟು ಉದ್ಯೋಗಾವಕಾಶಗಳು ದೊರೆಯುವಂತಾಗಬೇಕು ಎಂದು ಶ್ರೀನಿವಾಸ ಮಲ್ಯರು ತಮ್ಮ ಮನಸ್ಸಿನಲ್ಲಿ ಬಹಳ ವರ್ಷಗಳ ಹಿಂದೆಯೇ ಯೋಜನೆ ಹಾಕಿಕೊಂಡು, ಕೊನೆಗೂ ಆ ಯೋಜನೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ಯಶಸ್ವಿಯಾಗಿರುವುದು ಕಂಡುಬರುತ್ತದ. ಬೃಹತ್ ಬಂಡವಾಳದೊಂದಿಗೆ ಪಣಂಬೂರಿನಲ್ಲಿ ಮಂಗಳೂರು ರಸಗೊಬ್ಬರ ಕಾರ್ಖಾನೆ ಸ್ಥಾಪನೆಯಾಯಿತು. ಇದರಿಂದ ರೈತರಿಗೆ ಒಂದೆಡೆ ರಸಗೊಬ್ಬರದ ಉತ್ಪಾದನೆಯಾದರೆ, ಯುವ ಜನತೆಗೆ ಸಾಕಷ್ಟು ಉದ್ಯೋಗಾವಕಾಶಗಳು ಸೃಷ್ಟಿಯಾಯಿತು ಎಂಬುದನ್ನು ಹಾಗೂ ಶ್ರೀನಿವಾಸ ಮಲ್ಯರ ಈ ಯಶಸ್ವಿಕಾರ್ಯವನ್ನು ಖ್ಯಾತ ಪತ್ರಕರ್ತ ಮನೋಹರ ಪ್ರಸಾದರವರು ಹೆಮ್ಮೆಯಿಂದ ವ್ಯಕ್ತಪಡಿಸುತ್ತಾರೆ[೧೦].

ದಕ್ಷಿಣ ಕನ್ನಡ ಜಿಲ್ಲೆಯ ಯಾವುದೇ ಬೃಹತ್ ಯೋಜನೆಗಳನ್ನು ಗಮನಿಸಿದರೂ ಅದರ ಹಿಂದೆ ಶ್ರೀನಿವಾಸ ಮಲ್ಯರ ಕೊಡುಗೆ ಇರುವುದು ಎಲ್ಲರಿಗೂ ತಿಳಿದ ವಿಷಯ. ಈ ಪ್ರದೇಶದ ಅತ್ಯಂತ ದೊಡ್ಡ ಕೈಗಾರಿಕೆಯಾದ ಕುದುರೆಮೂಖ ಕಬ್ಬಿಣದ ಆದಿರಿನ ಕಾರ್ಖಾನೆ ದೇಶಕ್ಕೆ ಕೋಟ್ಯಂತರ ರೂಪಾಯಿ ವಿದೇಶಿ ವಿನಿಯಮವನ್ನು ತಂದು ಕೊಡುತ್ತಿದ್ದು, ಈ ಕಾರ್ಖಾನೆಯ ಬೆಳವಣಿಗೆಗೆ ನವಮಂಗಳೂರು ಬಂದರು ಇರುವುದೇ ಮುಖ್ಯ ಕಾರಣವೆಂದು ಹೇಳಬಹುದು. ಈ ಮಂಗಳೂರು ಬಂದರಿಗೆ ಹಲವು ಶತಮಾನಗಳ ಇತಿಹಾಸವಿದೆ. ಗ್ರೀಕರ ನೌಕೆ ಇಲ್ಲಿ

ಕ್ರಿಸ್ತಪೂರ್ವದಲ್ಲಿ ಬಂದಿರುವುದಕ್ಕೆ ಸಾಕಾಷ್ಟು ಪುರಾವೆಗಳಿವೆ. ಒಂದು ಕಾಲದಲ್ಲಿ ಅರಬರು, ಪೋರ್ಚುಗೀಸರೂ, ಡಚ್ಚರು, ಹಾಗೂ ಇಂಗ್ಲೀಷರು ಇಲ್ಲಿ ವ್ಯಾಪಾರಕ್ಕೆ ಬಂದಿದ್ದರೆಂದು ಈ ಬಂದರಿನ ಇತಿಹಾಸದಲ್ಲಿ ಕಂಡು ಬರುತ್ತದೆ. ಈ ಬಂದರು ನಿರ್ಮಾಣದಲ್ಲಿ ಶ್ರೀನಿವಾಸ ಮಲ್ಯರ ಹಿರಿಯ ಪಾತ್ರ ಇದೆ ಎನ್ನುವುದು ಪ್ರಭಾಕರ ಜೋಶಿಯವರ ಅಭಿಪ್ರಾಯವಾಗಿದೆ[೧೧].




೩೧–೧೨–೧೯೬೪ ರಲ್ಲಿ ಪಶ್ಚಿಮ ಕರಾವಳಿಯಲ್ಲಿ ಬಂದರ ನಿರ್ಮಾಣದ ಕುರಿತಾಗಿ ಶ್ರೀನಿವಾಸ ಮಲ್ಯರು ಸಂಸತ್ತಿನಲ್ಲಿ ಪ್ರಸ್ತಾಪಿಸಿದ್ದರು, ಅಂತೆಯೇ ಬಂದರ ನಿರ್ಮಾಣಕ್ಕಾಗಿಯೇ ನೇಮಿಸಲ್ಪಟ್ಟಿದ್ದ ತಜ್ಞರ ಸಮಿತಿಯು ಮಲ್ಪೆಯೇ ನೈಸರ್ಗಿಕ ಲಕ್ಷಣಗಳನ್ನೊಳಗೊಂಡ ಸೂಕ್ತ ಸ್ಥಳವೆಂದು ಶಿಫಾರಸನ್ನು ಮಾಡಿದ್ದರು, ಶ್ರೀನಿವಾಸ ಮಲ್ಯರು ತನ್ನ ರಾಜಕೀಯ ವರ್ಚಸ್ಸು ಹಾಗೂ ಕೈವಾಡ ತೋರಿಸಿ, ಮಲ್ಪೆಯ ಬದಲು ಮಂಗಳೂರಿನಲ್ಲೆ ಬ್ರಹತ್ ಬಂದರ ನಿರ್ಮಾಣವಾಗಬೇಕೆಂದು ಪಟ್ಟು ಹಿಡಿದರು. ಇದರ ಫಲವಾಗಿ ಮಂಗಳೂರಿನಲ್ಲೇ ಬ್ರಹತ್ ಬಂದರ ನಿರ್ಮಾಣವಾಗುವುದೆಂದು ಸರಕಾರವು ಆಜ್ಞೆಯನ್ನು ಹೊರಡಿಸಿತು. ಆದರೆ ಇಲ್ಲಿಯೂ ಗೊಂದಲಗಳು ಉಂಟಾದವು, ಮಂಗಳೂರಿನ ಬ್ರಹತ್ ಬಂದರದ ಯೋಜನೆಯು ಕೆಲವು ಆಸಕ್ತ ವರ್ಗದವರಿಗೆ ಹಾನಿಕಾರವಾಗ ಬಹುದೆಂದೇನೋ, ಅದನ್ನು ಮಂಗಳೂರಿನ ಹೆಸರಲ್ಲಿ ಪಣಂಬೂರಿಗೆ ವರ್ಗಾಹಿಸಲಾಯಿತು. ಬಂದರ ನಿರ್ಮಾಕ್ಕಾಗಿ ೧೨೦೦ ಎಕರೆ ಫಲವತ್ತಾದ ಬಂಗಾರದಂತಹ ಭೂಮಿಯನ್ನು ವಶಪಡಿಸಿಕೊಳ್ಳಲಾಯಿತು. ಆ ನೆಲದ ಮಣ್ಣಿನಲ್ಲಿ ತಮ್ಮ ಬಾಳ್ವೆಯ ಬೆಳಕನ್ನು ಕಂಡಿದ್ದ ಬೈಕಂಪಾಡಿ ಪಣಂಬೂರುಗಳ ಜನತೆಗೆ ಏನೇನೋ ಆಶ್ವಾಸನೆ ಕೊಟ್ಟು ಅವರನ್ನು ಪುನರ್ವಸತಿಯ ಹೆಸರಿನಲ್ಲಿ 'ವನವಾಸ' ಮಾಡುವಂತಹ 'ಕಾಟಿಪಳ್ಳ'ಕ್ಕೆ ದಾಟಿಸಿ ಬಂದರದ ಪ್ರಾರಂಭೋತ್ಸವವೂ ನಡೆಯಿತು. ಮಂತ್ರಿ ಮಾಗಧರ ಪಡೆಯೇ ಬಂದು ಪಣಂಬೂರು ಬಂದರದ ಕಾರ್ಯದ ಆರಂಭೋತ್ಸವ ನೆರವೇರಿತು.

ಮೊದಲಿಗೆ ವಶಪಡಿಸಿಕೊಂಡ ೧೨೦೦ ಎಕರೆ ಭುಮಿಯಲ್ಲಿ ವಾಸಿಸುತ್ತಿದ್ದ ಬಡ ಜನತೆಗೆ ಕೊಟ್ಟ ಆಶ್ವಾಸನೆಗಳನ್ನು ಪಾಲಿಸುವ ಪ್ರಾಮಾಣಿಕತನವನ್ನು ಸರಕಾರ ತೋರಲಿಲ್ಲ. ಅವರನ್ನು ಪಶುಗಳಿಗಿಂತ ಕೀಳಾಗಿ

ಕಾಣಲಾಗುತ್ತದೆ ಎಂಬ ದೂರು ಬಂತು. ಬೈಕಂಪಾಡಿ ಪಣಂಬೂರು, ತಣ್ಣೀರುಬಾವಿ, ಪಡುಕೋಡಿಗಳ ೧೫–೨೦ ಸಾವಿರಕ್ಕಿಂತಲೂ ಮಿಕ್ಕಿದ ಜನತೆ ೨೧–೧೨–೧೯೬೪ ರಂದು ಬೈಕಂಪಾಡಿಯಿಂದ ೭ ಮೈಲು ದೂರದ ಮಂಗಳೂರಿಗೆ ಶಾಂತ ಪಾದಯಾತ್ರೆ ನಡೆಸಿತು. ಈ ಮೆರವಣಿಗೆಯಲಿ ಎಲ್ಲಾ ವರ್ಗದ, ವಯೋಮಿತಿಯ ಜನರು ಪಾಲ್ಗೊಂಡಿದ್ದರು. ಜನತೆಯ ಒಗ್ಗಟ್ಟಿನ ಪ್ರತೀಕವಾದ ಆ ಮೆರವಣಿಗೆ ಆ ದಿನ ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ ಶಾಂತ ರೀತಿಯ ಅನ್ನಸತ್ಯಾಗ್ರಹ ನಡೆಸಿತು. ಜನತೆಯು ಅಂದಿನ ಮುಖ್ಯ ಮಂತ್ರಿ ನಿಜಲಿಂಗಪ್ಪನವರನ್ನು, ಮಾತಿನ ಚಟಾಕಿಯಿಂದಲ್ಲೇ ತಮಗಾದ ಅನ್ಯಾಯದ ವಿರುದ್ಧ ದೂರನ್ನು ಸಲ್ಲಿಸಿತ್ತು, ಆದರೆ ಸರಕಾರದ ನಿರ್ಧಾರದ ಮುಂದೆ ಮುಖ್ಯಮಂತ್ರಿಗಳ ಮಾತಿಗೆ ಬೆಲೆಯೇ ಇಲ್ಲದಂತಾಯಿತು, ಆದರೂ ಪಣಂಬೂರಿನ ಜನತೆಯು ತಮಗಾದ ಅನ್ಯಾಯದ ವಿರುದ್ಧ ಹೋರಾಟ ನಡೆಸಿದರು, ಈ ರೀತಿಯ ಅನ್ಯಾಯಗಳು ಪ್ರಜಾಪ್ರಭುತ್ವದಲ್ಲಿ ನಡೆಯಬಾರದು, ಸರಕಾರವು ಇತರ ಭೂಮಿಯನ್ನು ಪಡೆದು ಅಲ್ಲಿ ಬಂದರವನ್ನು ಸ್ಥಾಪಿಸಲಿ ಎಂದು ಮನವಿಮಾಡಿದರು, ಜನತೆಯ ಸಹಕಾರವಿಲ್ಲದೆ, ಯಾವ ಯೋಜನೆಯೂ ಯಶಸ್ವಿಯಾಗಲಾರದೆಂದು ಸರಕಾರ ಇನ್ನಾದರೂ ಮನಗಾಣಬೇಕು, ಪಣಂಬೂರಿನ ಜನತೆಗೆ ನ್ಯಾಯದೊರೆಯಬೇಕು. ಅವರ ಹೋರಾಟ ಯಶಸ್ವಿಯಾಗಲಿ ಎಂದು ಅಂದಿನ ನವಯುಗ ಪತ್ರಿಕೆಯಲ್ಲಿ ಪ್ರಕಟಗೊಂಡ ಸುದ್ಧಿಯು ತಿಳಿಸಿದೆ[೧೨].

ಮಂಗಳೂರೇ ಪ್ರಮುಖ ವ್ಯಾಪಾರೀ ಕೇಂದ್ರವಾಗಿದ್ದರಿಂದಾಗಿ ಮಲ್ಪೆಯಲ್ಲಿ ಹಾರ್ಬರ್ ನಿರ್ಮಿಸುವುದು ಸರಿಯಲ್ಲವೆಂಬ ಶ್ರೀನಿವಾಸ ಮಲ್ಯರ ವಾದಕ್ಕೆ ಕೊನೆಗೂ ಬೆಂಬಲ ಸಿಗುವಂತಾಯಿತು. ಛಲ ಬಿಡದೆ ತ್ರಿವಿಕ್ರಮನಂತೆ ಬೆನ್ನು ಬಿದ್ದ ಶ್ರೀನಿವಾಸ ಮಲ್ಯರು ನವಮಂಗಳೂರು ಬಂದರಿನ ನಿರ್ಮಾಣಕ್ಕಾಗಿ ಅವಿರತವಾಗಿ ಶ್ರಮಿಸಿದರು. ಬಂದರನ್ನು ಮಲ್ಪೆಗೆ ವರ್ಗಾಯಿಸಲು ಉಡುಪಿಯ ಕೆಲವು ಸ್ಥಾಪಿತ ಹಿತಾಶಕ್ತಿಗಳು ಲಾಬಿ ನಡೆಸುತ್ತಲೇ ಇದ್ದರೂ, ಪ್ಲಾನಿಂಗ್ ಕಮಿಟಿಯಲ್ಲಿ ಕರ್ನಾಟಕದ ಸದಸ್ಯರ ಕೊರತೆ ಇದ್ದರೂ, ಸ್ವಂತ ಕ್ಷೇತ್ರದವರೇ ವಿರೋಧ ವ್ಯಕ್ತಪಡಿಸಿ ಸ್ಥಳಾಂತರಿಸಲು ಸಂಚು ಹೊಡುತ್ತಿದ್ದಾಗಲೂ ಎದೆಗುಂದದ ಶ್ರೀನಿವಾಸ ಮಲ್ಯರು, ಪ್ರಧಾನಿ ನೆಹರುರವರರೊಂದಿಗಿನ ಅನ್ಯೋನ್ಯತೆಯಿಮದ ಪ್ಲಾನಿಂಗ್ ಕಮಿಟಿಯಲ್ಲಿ ಸದಸ್ಯರೇ ಇರದಿದ್ದರೂ, ಒಂದು ಕಡೆಯಿಂದ ಪ್ಲಾನಿಂಗ್ ಕಮಿಟಿಯಲ್ಲಿ ಬಹುತೇಕ ಸದಸ್ಯರು ತಮಿಳುನಾಡಿನವರೇ ಆಗಿದ್ದುದ್ದರಿಂದ, ಬಂದರನ್ನು ತಮಿಳುನಾಡಿಗೆ ನೀಡಬೇಕೆಂದು ಅಲ್ಲಿನವರು ಒತ್ತಾಯಿಸುತ್ತದ್ದರೂ, ಶ್ರೀನಿವಾಸ ಮಲ್ಯರು ಕೂಡಲೇ ಅಸೆಸ್‌ಮೆಂಟ್ ಮಾಡಿಸಿ ಕ್ಷಿಪ್ರವಾಗಿ ಫೈಲನ್ನು ಪ್ಲಾನಿಂಗ್ ಕಮಿಟಿ ಮುಂದೆ ದಾಟಿಸುವಲ್ಲಿ ಸಫಲರಾದರು ಹಾಗೂ ಪ್ಲಾನಿಂಗ್ ಕಮಿಟಿಯಲ್ಲಿ ನಮ್ಮ ರಾಜ್ಯದ ಸದಸ್ಯರೇ ಇರದಿದ್ದರೂ ಶ್ರೀನಿವಾಸ ಮಲ್ಯರ, ಚಾಣಾಕ್ಷತನದಿಂದ ಹಾರ್ಬರ್ ಪ್ರಾಜೆಕ್ಟ್ ಎರಡಾಗಿ ಕವಲೊಡೆದು ಮಂಗಳೂರು ಮತ್ತು ತಮಿಳುನಾಡುಗಳಲ್ಲಿ ಹಾರ್ಬರ್ ನಿರ್ಮಾಣಕ್ಕೆ ಮಂಜೂರಾತಿ ದೊರಕಿಬಿಟ್ಟಿತ್ತು. ಕೊನೆಗೊ ಶ್ರೀನಿವಾಸ ಮಲ್ಯರ ಮಹತ್ವಾಕಾಂಕ್ಷೆಯ ಯೋಜನೆ ಕಾರ್ಯ ರೂಪಕ್ಕೆ ಬಂದಿತ್ತು, ಮಂಗಳೂರಿನ ಪ್ರತಿಷ್ಠಿತ ನವಮಂಗಳೂರು ಸರ್ವಋತು ಬಂದರು. ೧೯೬೫ ರಲ್ಲಿ ಶ್ರೀನಿವಾಸ ಮಲ್ಯರವರ ಉಪಸ್ಥಿತಿಯಲ್ಲಿ ಉದ್ಘಾಟನೆಗೊಂಡಿತು. ಕರಾವಳಿ ಕರ್ನಾಟಕದ

ವ್ಯಾಪಾರ ಕೇಂದ್ರವಾಗಿ ಮಂಗಳೂರು ಪರವರ್ತನೆಗೊಳ್ಳುವಂತಾಯಿತು. ಇಂದು ಈ ಬಂದರು ವಾರ್ಷಿಕ ನೂರುಕೋಟಿಯಷ್ಟು ಆದಾಯವನ್ನು ಪಡೆದು ಬ್ರಹತ್ ವ್ಯಾಪಾರ ಕೇಂದ್ರವಾಗಿ ಸಾವಿರಾರು ಜನರಿಗೆ ಉದ್ಯೋಗ ಕಲ್ಪಿಸಿದ ಉದ್ಯಮವಾಗಿ ಬೆಳೆದಿದೆ. ಹೀಗೆ ಮಂಗಳೂರಿಗೆ ಸರ್ವಋತು ಬಂದರ ದೊರಕಬೇಕಾದರೆ ಶ್ರೀನಿವಾಸ ಮಲ್ಯರು ಹರಸಾಹಸ ಮಾಡಬೇಕಾಯಿತು. ಇಂದು ಈ ಬಂದರು ಪರಿಸರದಲ್ಲಿ ಹಲವ ಕೈಗಾರಿಕಾ ಘಟಕಗಳು ತಲೆ ಎತ್ತಿವೆ. ರಾಸಾಯನಿಕ ಗೊಬ್ಬರದ ಕಾರ್ಖಾನೆಯೂ, ಕುದುರೆಮುಖ ಆದಿರು ಸಂಸ್ಥೆಯೂ, ತೈಲ ಶುದ್ಧೀಕರಣದ ಬ್ರಹತ್ ಕಾರ್ಖಾನೆಯೂ, ಈ ಬಂದರಿನ ಸೌಕರ್ಯಗಳನ್ನು ಅವಲಂಬಿಸಿ ಅಲ್ಲಿ ನೆಲೆಯಾಗಿವೆ. ನವಮಂಗಳೂರ ಬಂದರಿನ ಮುಖ್ಯದ್ವಾರಕ್ಕೆ "U S Mally Gate" ಎಂದು ಹೆಸರಿಟ್ಟಿದ್ದಾರೆ, ಅದರ ಮುಂಭಾಗದಲ್ಲಿ ಶ್ರೀನಿವಾಸ ಮಲ್ಯರ ಮೂರ್ತಿಯೊಂದನ್ನು ಸ್ಥಾಪಿಸಿರುವುದು ಕಂಡುಬರುತ್ತದೆ[೧೩].



(ಬಂದರು)

ಹೀಗೆ ಶ್ರೀನಿವಾಸ ಮಲ್ಯರ ಸಾಧನೆಗಳತ್ತ ಕಣ್ಣು ಹಾಯಿಸಿದಾಗಲೆಲ್ಲ ಅವರಷ್ಟು ಪ್ರಬಲ ಅಭಿವೃದ್ಧಿಯ ಹರಿಕಾರರೆನಿಸಿದ ರಾಜಕಾರಣಿಯವರು ಮತ್ತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಣಲೇ ಇಲ್ಲ ಎಂದು ಹೇಳಬಹುದು, ಶ್ರೀನಿವಾಸ ಮಲ್ಯರಿಗೆ ಭವಿಷ್ಯದ ಕನಸಿತ್ತು, ಅವರು ಬತ್ತದ ಚಿಲುಮೆಯಂತಿದ್ದರು. ಶ್ರೀನಿವಾಸ ಮಲ್ಯರ ಮನಸ್ಸಿನಲ್ಲಿದ್ದ ಒಂದು ಯೋಜನೆ ಕಾರ್ಯ ರೂಪಕ್ಕೆ ಬಂದ ಕೊಡಲೆ ಮತ್ತೊಂದು ಯೋಜನೆ ಮನದಾಳದಲ್ಲಿ ಸಿದ್ಧವಾಗುತ್ತಿತ್ತು. ಭವಿಷ್ಯದಲ್ಲಿ ರೂಪಿಸಬೇಕಾದ ಯೋಜನೆಗಳ ಪಟ್ಟಿಯೇ ಅವರಲ್ಲಿತ್ತು. ಶ್ರೀನಿವಾಸ ಮಲ್ಯರಿಗೆ ಇದ್ದ ಕನಸುಗಳಲ್ಲಿ ಮುಖ್ಯವಾದದ್ದು ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲ ನದಿ, ಹಳ್ಳಗಳಿಗೆ ವೆಂಟೆಡ್ ಡ್ಯಾಂ ನಿರ್ಮಿಸುವುದು, ನೀರಿನ ಕೊರತೆ, ಮಣ್ಣಿನ ಕೊಚ್ಚಣೆ ತಡೆಯುವುದು, ಹಾಗೂ ಸಣ್ಣ ವಿದ್ಯುತ್ ಉತ್ಪಾದಕಗಳ ಸ್ಥಾಪನೆ, ಮಂಗಳೂರಿನ ಸೌದರ್ಯ ಹೆಚ್ಚಿಸಲು ವಿವಿಧ ಉದ್ಯಾನಗಳ ನಿರ್ಮಾಣ, ಹಳೆಬಂದರುಗಳಲ್ಲಿ ಸೇತುವೆ ನಿರ್ಮಾಣ ಹಾಗೂ ಕಳ್ಳ ಸಾಗಾಣಿಕೆ ತಡೆಯಲು ಹೈವೇ ಬಂದರನ್ನು ಸಂಪರ್ಕಿಸದಂತೆ ಬಳಸು ದಾರಿ ನಿರ್ಮಾಣ ಇತ್ಯಾದಿ, ಆದರೆ ಶ್ರೀನಿವಾಸ ಮಲ್ಯರಿಗೆ

ಈ ಎಲ್ಲಾ ಯೋಜನೆಗಳನ್ನು ಪೂರ್ತಿಗೊಳಿಸಲು ಆಗಲಿಲ್ಲ. "ಅವರು ಇನ್ನಷ್ಟು ಕಾಲ ಇದ್ದಿದ್ದರೆ ದಕ್ಷಿಣ ಕನ್ನಡ ಜಿಲ್ಲೆ ಇನ್ನಷ್ಟು ಅಭಿವೃದ್ಧಿ ಹೊಂದುತ್ತಿತ್ತು" ಎಂದು ಕೆ.ಕೆ. ಶೆಟ್ಟರು ತಮ್ಮ ಅನಿಸಿಕೆಯನ್ನು ವ್ಯಕ್ತ ಪಡಿಸುತ್ತಾರೆ. ಹೀಗೆ ಶ್ರೀನಿವಾಸ ಮಲ್ಯರು ವಿದ್ಯೆ, ಉದ್ಯೋಗ, ಕೈಗಾರಿಕೀಕರಣ ಮೊದಲಾದ ಆಧುನಿಕ ಸೌಲಭ್ಯಗಳು ಜನತೆಗೆ ದೊರೆಯುವಂತೆ ಮಾಡಿ ಈ ಜಿಲ್ಲೆಯ ಉನ್ನತಿಗೆ ಶ್ರಮಿಸಿದವರಾಗಿದ್ದರು ಎಂಬುದು ಕಂಡು ಬರುತ್ತದೆ.

## ೪.೩. ದಕ್ಷಿಣ ಕನ್ನಡ ಜಿಲ್ಲೆಗೆ ಶ್ರೀನಿವಾಸ ಮಲ್ಯರ ಸಾಮಾಜಿಕ ಕೊಡುಗೆಗಳು

ಶ್ರೀನಿವಾಸ ಮಲ್ಯರ ಕೊಡುಗೆಗಳು ಕೇವಲ ಆರ್ಥಿಕ ವಲಯಗಳಿಗೆ ಮಾತ್ರ ಸೀಮಿತವಾಗಿರದೆ, ಹಲವಾರು ಸಾಮಾಜಿಕ ಕೊಡುಗೆಗಳನ್ನು ದಕ್ಷಿಣ ಕನ್ನಡ ಜಿಲ್ಲೆಗೆ ನೀಡಿರುವುದನ್ನು ನಾವು ಗಮನಿಸಬೇಕು. ಶ್ರೀನಿವಾಸ ಮಲ್ಯರು ಒಬ್ಬ ರಾಜಕಾರಿಣಿಯಾಗಿದ್ದರೂ ಅವರು ಜನಪದ ನಾಯಕ. ಜನರ ಬದುಕು ಹಸನಾಗಬೇಕು, ಅದಕ್ಕಾಗಿ ಪ್ರತಿಯೊಬ್ಬ ಪ್ರಜೆಯು ದೇಶಭಕ್ತನಾಗಿ ಸಮಾಜ ಸೇವಕನಾಗಿ ದುಡಿಯಬೇಕೆಂಬುದೇ ಅವರ ಆಶಯವಾಗಿತ್ತು. ಜನತೆಗೆ ಹಿತಗಳನ್ನು ಮಾಡುವ ಅನೇಕ ಕಾರ್ಯಗಳನ್ನು ಶ್ರೀನಿವಾಸ ಮಲ್ಯರು ಮಾಡಿ, ಕೀರ್ತಿಶೇಷರಾಗಿ, ನಾಡಿನ ಏಳಿಗೆಗೆ, ಜನತೆಗಾಗಿ ಸೇವೆ ಸಲ್ಲಿಸುವ ಇಂದಿನ ಮತ್ತು ಮುಂದಿನ ಜನಾಂಗಕ್ಕೆ ಸ್ಫೂರ್ತಿಯಾಗಿದ್ದರು. ಇವರ ಸಂಪಾದನೆ ತ್ಯಾಗಕ್ಕೆ ಮೀಸಲಾಗಿತ್ತು. ತ್ಯಾಗವೇ ಭೋಗವೆಂಬ ಮಂತ್ರವಾಣಿಯ ಪ್ರಯೋಗವನ್ನು ಶ್ರೀನಿವಾಸ ಮಲ್ಯರು ತಮ್ಮ ಜೀವನದುದ್ದಕ್ಕೂ ಮಾಡುತ್ತಾ ಬಂದಿದ್ದರು. ವಿಶಾಲ ಭಾರತದಲ್ಲಿ ಬಹು ಪ್ರಮುಖ ಸಾರ್ವಜನಿಕ ಕಾರ್ಯಗಳನ್ನು ಸುವ್ಯವಸ್ಥಿತವಾಗಿ ಪೂರ್ತಿಗೊಳಿಸಿ, ಸ್ವಂತಕ್ಕೆಂದು ಐಶ್ವರ್ಯವಾಗಲಿ, ಸ್ವಂತ ಮನೆಯನ್ನಾಗಲಿ ಮಾಡದೇ ಜೀವನದ ಕೊನೆಗೆ ಆರ್ಥಿಕ ಸಂಕಷ್ಟವನ್ನು ಅನುಭವಿಸಿದರು ಎಂದು ಅವರ ಕುಟುಂಬದ ನಿಕಟವರ್ತಿ ಜನಾರ್ಧನ ಪ್ರಭುಗಳು, ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು[೧೪].

ಶ್ರೀನಿವಾಸ ಮಲ್ಯರು ತಾನು ಕೈಗೆ ತೆಗೆದುಕೊಂಡ ಸಾರ್ವಜನಿಕ ವಿಷಯಗಳಲ್ಲಿ ಸಮಯ ಪ್ರಜ್ಞೆಯಿಂದ ಕೆಲಸ ಸಾಧಿಸುತ್ತಿದ್ದರು. ಇವರು ಯಾವತ್ತೂ ತಮ್ಮನ್ನು ಜನತಾ ಜನಾರ್ಧನನ ಪ್ರತಿನಿಧಿ ಎಂದು ತಿಳಿದುಕೊಂಡು ಪ್ರಸಿದ್ಧಿಯಿಂದ ದೂರವಿರುತ್ತದ್ದರು. ಆದರೆ ಮನಸ್ಸಿನಲ್ಲಿ ಅಂದುಕೊಂಡ ಯೋಜನೆಗಳನ್ನು ಶ್ರೇಷ್ಟ ಗುಣಮಟ್ಟದಲ್ಲಿ ಹಾಗೂ ನಿಗದಿತ ವೇಳೆಯಲ್ಲಿ ಮುಗಿಸುವುದೇ ಇವರಲ್ಲಿರುವ ಶ್ರೇಷ್ಟ ಗುಣವಾಗಿತ್ತು. ಜನರ ಸುಖ ದು:ಖಗಳಿಗೆ ನೇರವಾಗಿ ಸ್ಪಂದಿಸಿ, ಸಾಮಾಜಿಕ ಕೆಲಸಗಳನ್ನು ಮಾಡಿ, ಅಭಿವೃದ್ಧಿಯನ್ನು ಕಂಡು ತಮ್ಮ ಮನಸ್ಸಿನಲ್ಲಿಯೇ ಸಂತೋಷಪಡುವುದು ಶ್ರೀನಿವಾಸ ಮಲ್ಯರ ಸ್ವಭಾವವಾಗಿತ್ತು. ಅವರಲ್ಲಿ ಜಾತಿ ಮತ ಬಳಗ ಎಂಬ ಭೇದಭಾವವೇ ಇರಲಿಲ್ಲ. ಎಲ್ಲರೂ ತನ್ನವರೇ ಎಂಬ ಉದಾತ್ತ ದೃಷ್ಟಿಯಿಂದ ನಡೆದುಕೊಳ್ಳುತ್ತಿದ್ದರು ಎಂಬುದು ಕಂಡುಬರುತ್ತದೆ. ಗೃಹಮಂಡಳಿ ಅಧ್ಯಕ್ಷರಾಗಿದ್ದಾಗ ಪಾರ್ಲಿಮೆಂಟಿನ ಸಕಲ ಸದಸ್ಯರ ಮನೆಗಳಿಗೆ ಹೊಸ ಆಯಾಮಗಳನ್ನು ಹಾಗೂ ಮನೆಯ ಸುತ್ತ ಅಂದವಾದ ಹೂದೋಟವನ್ನು ಕೊಡಿಸುವಲ್ಲಿ ಬಹಳಷ್ಟು ಶ್ರಮಿಸಿದ್ದಾರೆ. ಶ್ರೀನಿವಾಸ ಮಲ್ಯರು ಅಖಿಲಭಾರತ ಗುಡಿ ಕೈಗಾರಿಕೆಯ ಮಂಡಳಿಯ ಬಹುಪ್ರತಿಭೆ ಕಾರ್ಯಕರ್ತರಾಗಿ, ಗುಡಿಕೈಗಾರಿಕೆ ಮಾಡುವ ಜನರ ಆಶೋತ್ತರಗಳ ಬಗ್ಗೆ ತುಂಬಾ ಕಾಳಜಿ

ವಹಿಸಿದ್ದರು. ಪ್ರತಿಭಾವಂತ ಗುಡಿಕೈಗಾರಿಕೆ ಪರಿಶ್ರಮವನ್ನು ಗುರುತಿಸಿ ಅವರಿಗೆ ಸೂಕ್ತವಾದ ರಾಷ್ಟ್ರೀಯ ಪುರಸ್ಕಾರ ಸಿಗುವಂತೆ ಪ್ರಯತ್ನಿಸಿದರು.

ಶ್ರೀನಿವಾಸ ಮಲ್ಯರ ಸಹೋದರರಾದ ಡಾ. ಯು. ಪಿ. ಮಲ್ಯರು ಮಂಗಳೂರಿನ ರಥಬೀದಿಯಲ್ಲಿ ''ರಾಮಕೃಷ್ಣ ಔಷದಾಲಯವನ್ನು ಇಟ್ಟುಕೊಂಡಿದ್ದು, ದೇಶ ಸೇವಕರಿಗೆ ತನ್ನ ಔಷಧಾಲಯದಲ್ಲಿ ಉಚಿತ ಶುಶ್ರೂಷೆ ಮಾಡುತ್ತಿದ್ದರು. ಶ್ರೀನಿವಾಸ ಮಲ್ಯರು ಸಹ ಮಂಗಳೂರಿಗ ಬಂದ ಸಮಯದಲ್ಲಿ ಬಿಡುವಾದಾಗ ತನ್ನ ಅಣ್ಣನ ಔಷಧಾಲಯದಲ್ಲಿ ಬಂದ ಅನೇಕ ಬಡವರಿಗೆ, ಉಚಿತ ಶುಶ್ರೂಷೆ ಮಾಡಿ ಕಳುಹಿಸುತ್ತಿದ್ದರು ಎಂದು ಖ್ಯಾತ ಪತ್ರಿಕೋದ್ಯಮಿ ಕಯ್ಯಾರ ಕಿಞ್ಞಣ್ಣ ರೈ ಯವರು ಶ್ರೀನಿವಾಸ ಮಲ್ಯರ ಗುಣಗಾನ ಮಾಡಿರುವುದು ತಿಳಿದುಬರುತ್ತದೆ''.

ಹಿಂದೆ ದೇಶ ಭಕ್ತರಾಗಿದ್ದ ಕಾರ್ನಾಡು ಸದಾಶಿವರಾಯರ ಮಂಗಳೂರಿನ ಕೊಡಿಯಾಲ್‌ಬೈಲಿನ ಮನೆಯ ಜಾಗದಲ್ಲಿ, ಕಾಂಗ್ರೆಸ್ ಕಛೇರಿ, ಖಾದಿ ಭಂಡಾರ, ಬಾಲಸಾಹಿತ್ಯ ಮಂಡಳಿ ಹಾಗೂ ರಾಜಕೀಯ ಸಾಹಿತ್ಯಿಕ ಚಟುವಟಿಕೆಯ ಸಂಸ್ಥೆಗಳಿದ್ದವು. ಸಂಜೆ ಹೊತ್ತಿಗೆ ಅಲ್ಲಿ ಹಲವಾರು ಸ್ವಾತಂತ್ರ್ಯ ಸೇನಾನಿಗಳು, ಸಾಹಿತ್ಯಜ್ಞರು ದಿನಂಪ್ರತಿ ಸೇರುತ್ತಿದ್ದರು. ಶ್ರೀನಿವಾಸ ಮಲ್ಯರು ದಿನನಿತ್ಯವೆಂಬಂತೆ ಅಲ್ಲಿಗೆ ಬರದೇ ಇದ್ದರೂ, ಜಿಲ್ಲಾ ಕಾಂಗ್ರೆಸ್ ಸಭೆಗೆ ತಪ್ಪದೇ ಆಗಮಿಸುತ್ತಿದ್ದರು. ಅಲ್ಲಿ ಸಭಾ ಕಾರ್ಯಕ್ರಮಗಳು ಚರ್ಚೆಯಾಗುತ್ತಿದ್ದವು. ಮೂಡಬಿದ್ರೆ ಉಮೇಶರಾಯರು, ಕೈಡೇಲು ತಿಮ್ಮಪ್ಪ ಶೆಟ್ಟರು, ಮೊಳಹಳ್ಳಿ ಶಿವರಾಯರು ಮುಂತಾದವರು ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು. ಆದರೆ ಕೊನೆಗೆ ಎಲ್ಲರೂ ಶ್ರೀನಿವಾಸ ಮಲ್ಯರ ಮಾತಿಗೆ ಒಪ್ಪಿಗೆ ನೀಡುತ್ತಿದ್ದರು. ಶ್ರೀನಿವಾಸ ಮಲ್ಯರ ಅಭಿಪ್ರಾಯ ಪ್ರಕಟನೆಯಲ್ಲಿ ಸ್ವಾರ್ಥ ಸಂಗತಿಯಿರಲಿಲ್ಲವಾಗಿದ್ದರಿಂದ ಸರ್ವಾನುಮತದ ಒಪ್ಪಿಗೆ ಪಡೆಯಲು ಸಾದ್ಯವಾಗುತ್ತಿತ್ತು. ಗ್ರಾಮೀಣ ಮಟ್ಟದಲ್ಲಿ ಪಕ್ಷ ಸಂಘಟನೆಯೊಂದಿಗೆ ಗುಡಿ ಕೈಗಾರಿಕೆಗೆ ಹೆಚ್ಚಿನ ಉತ್ತೇಜನ ನೀಡಿ ಹಳ್ಳಿ ಹಳ್ಳಿಗಳಲ್ಲಿ ಕೈಗಾರಿಕಾ ಸಂಘಟನೆ ಕೈಗೊಂಡು ಎಲ್ಲಾ ರೀತಿಯ ವ್ಯವಸ್ಥೆ ಮಾಡಿದರು. ತಮ್ಮ ಅಧಿಕಾರವಧಿಯಲ್ಲಿ ಹಳ್ಳಿ ಹಳ್ಳಿಗಳಲ್ಲಿ ಸಂಪರ್ಕಸೇತುವೆ, ರಸ್ತೆ ಗುಡಿಕೈಗಾರಿಕೆ, ಉದ್ಯೋಗ, ಬ್ರಹತ್ ಕಾರ್ಖಾನೆ, ಜಲನಿರ್ವಹಣೆ ಇತ್ಯಾದಿಗಳಗೆ ಹೆಚ್ಚಿನ ಆದ್ಯತೆ ನೀಡಿದರು. ಮಂಗಳೂರಿನ ಜಿಲ್ಲಾ ವೆನಲಾಕ್ ಆಸ್ಪತ್ರೆಯನ್ನು ಆಧುನೀಕರಣಗೊಳಿಸಿ ಬಡಜನರಿಗೆ ಉಚಿತವಾಗಿ ವೈದ್ಯಕೀಯ ಸೌಲಭ್ಯಗಳನ್ನು ದೊರಕುವಂತೆ ಶ್ರಮಿಸಿದರು. ಹಾಗೆಯೇ ಶಿಶು ವಿಭಾಗದ ವಾರ್ಡ್‌ನ್ನು ವೆನ್‌ಲಾಕ್ ಆಸ್ಪತ್ರೆಯಲ್ಲಿ ಸ್ಥಾಪಿಸಿದರು.

ಹೀಗೆ ಚಿಕ್ಕಂದಿನಿಂದಲೇ ಬಡವರ ಬಗ್ಗೆ ಸಮಾಜದಲ್ಲಿ ನಿಕೃಷ್ಟ ಸ್ಥಿತಿಯಲ್ಲಿದ್ದ ಜನರ ಬಗ್ಗೆ ಅವರಲ್ಲಿ ವಿಶೇಷ ಕಾಳಜಿ ಇದ್ದದ್ದು ಕಂಡು ಬರುತ್ತದೆ. ರಾಷ್ಟ್ರದ ಸ್ವಾತಂತ್ರ್ಯ ಸಂಗ್ರಾಮದ ಆ ಸಂಕ್ರಮಣ ಕಾಲದಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಜೈಲಿಗೆ ಹೋಗುತ್ತಿದ್ದಾಗ ಅವರ ಕುಟುಂಬಗಳಿಗೆ ಉಪವಾಸ ಬೀಳದಂತೆ ಆರ್ಥಿಕ ನೆರವನ್ನು ಮತ್ತು ಇತರ ಸಹಾಯವನ್ನು ಕಾಲಕಾಲಕ್ಕೆ ಒದಗಿಸುವ ವ್ಯವಸ್ಥೆಯನ್ನು ಶ್ರೀನಿವಾಸ ಮಲ್ಯರು ತೊಡಗಿಸಿಕೊಂಡಿದ್ದರು. ಖಾದಿ ಪ್ರಚಾರ, ಹರಿಜನರಿಗೆ ದೇವಳಗಳಲ್ಲಿ ಪ್ರವೇಶ, ರಾಷ್ಟ್ರಭಾಷೆಯಾಗಿ ಹಿಂದಿ, ಗ್ರಾಮೋದ್ಯೋಗ, ಜಾತೀಯತೆ ನಿರ್ಮೂಲನೆ ಇತ್ಯಾದಿ

ಕಾರ್ಯಕ್ರಮಗಳಿಗೆ ಶ್ರೀನಿವಾಸ ಮಲ್ಯರು ಬೆಲೆಕೊಡುತ್ತಿದ್ದರು. ಅಂತಹ ಕಾರ್ಯಕ್ರಮಗಳನ್ನು ಹೃದಯ ಪೂರ್ವಕವಾಗಿ, ಪೂರ್ಣರೂಪದಿಂದ ಕಾರ್ಯರೂಪಗೊಳಿಸಲು ಕಾರ್ಯ ಪ್ರವೃತ್ತರಾಗುತ್ತಿದ್ದರು. ಇಂತಹ ಕಾರ್ಯಗಳನ್ನು ಅನುಷ್ಠಾನಿಸುವಾಗ ಶ್ರೀನಿವಾಸ ಮಲ್ಯರು ಹಲವು ಬಾರಿ ಜೈಲಿಗೆ ಹೋಗಬೇಕಾಗಿ ಬಂದಾಗಲೂ ಹಿಂಜರಿಯದೆ ಜನಸೇವೆ, ಸೇವಾಮನೋಭಾವನೆ ಹಾಗೂ ಶ್ರದ್ಧೆಯಿಂದಾಗಿ ಸರ್ವ ಜನಾದರಣೀಯರಾಗಿದ್ದರು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ನಿಸ್ವಾರ್ಥ ಮನಸ್ಸಿನಲ್ಲಿ ದುಡಿದ ಎಷ್ಟೋ ಮಹನೀಯರ ಮಕ್ಕಳಿಗೆ ಬ್ಯಾಂಕುಗಳಲ್ಲಿ, ವಾಣಿಜ್ಯ ಸಂಸ್ಥೆಗಳಲ್ಲಿ ಕೆಲಸ ಕೊಡಿಸಲು ಅಥವಾ ಸರಕಾರಿ ನೌಕರಿ ಕೊಡಿಸಲು ಶ್ರೀನಿವಾಸ ಮಲ್ಯರು ಪ್ರಯತ್ನಿಸುತ್ತಿದ್ದರು ಹಾಗೂ ಶಿಫಾರಸ್ಸು ಮಾಡಿ ನೌಕರಿ ಕೊಡಿಸುತ್ತಿದ್ದರು. ಇದು ಕೂಡ ಶ್ರೀನಿವಾಸ ಮಲ್ಯರ ಮಾನವೀಯ ದೃಷ್ಟಿಗೆ ಸಾಕ್ಷಿಯಾದ ಕಾರಣವಾಗಿದೆ.

ಹೀಗೆ ಶ್ರೀನಿವಾಸ ಮಲ್ಯರು ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಜಾತಿಯ ಎಲ್ಲಾ ವೃತ್ತಿ ಉದ್ಯೋಗಗಳ, ಅಶಿಕ್ಷಿತ, ಸುಶಿಕ್ಷಿತ, ಸರ್ವಜನತೆಗೂ, ಒಬ್ಬ ಸೋದರನಂತೆ ಬೇಕಾದ ಜನವಾಗಿದ್ದಾರೆ. ಎಲ್ಲರ ಸುಖ ದುಃಖಗಳನ್ನೂ ಕಿವಿಗೊಟ್ಟು ಕೇಳಿ, ದೊಡ್ಡಸ್ತಿಕೆಯ ಠೀವಿಯಿಲ್ಲದೆ ತನ್ನ ಕೈಯಿಂದಾಗುವ ನೆರವು ನೀಡುವ ಹೃದಯವಂತಿಕೆಯ ಹಿರಿತನ ಅವರಲ್ಲಿದೆ. ಆದ್ದರಿಂದಲೇ ದಕ್ಷಿಣ ಕನ್ನಡ ಜಿಲ್ಲೆಯ ೧೭ ಲಕ್ಷ ಜನ ಸಮುದಾಯದಲ್ಲಿ ಶ್ರೀನಿವಾಸ ಮಲ್ಯರು ಒಂದಂಗುಲ ಎತ್ತರದಲ್ಲೇ ರಾರಾಜಿಸುತ್ತಾರೆ. ಇಂಗ್ಲಿಷ್, ಕನ್ನಡ, ತಮಿಳು, ಮಲೆಯಾಳಿ, ಮರಾಠಿ, ಗುಜರಾತಿ, ತುಳು, ಕೊಂಕಣಿ, ಹಿಂದಿ, ಉರ್ದು, ಇವಿಷ್ಟು ಭಾಷೆಗಳನ್ನು ಬಲ್ಲವರು. ಸಾಮಾನ್ಯರ ನಡುವೆ ತಾನೊಬ್ಬ ಸಾಮಾನ್ಯನಾಗಿ ನಡೆದುಕೊಳ್ಳುವ ದೈಹಿಕ, ಮಾನಸಿಕ, ಚುರುಕುತನ ಅವರಲ್ಲಿರುತ್ತದೆ. ಶ್ರೀನಿವಾಸ ಮಲ್ಯರು ಬಡ ಕಾಂಗ್ರೆಸ್ಸಿಗರಷ್ಟೇ ಅಲ್ಲದೆ ಮಂಗಳೂರು ನಗರದ ವ್ಯಾಪಾರಿ ವೃಂದಕ್ಕೂ, ಧನಿಕ ವರ್ಗಕ್ಕೂ, ಕಾಂಗ್ರೆಸ್ ಸೇವಾ ಮಾರ್ಗದರ್ಶಕರಾದರು. ಶ್ರೀನಿವಾಸ ಮಲ್ಯರು ವ್ಯಾಪರೋದ್ಯಮಗಳಲ್ಲಿ ತೋರಿದ್ದ ಅನುಪಮ ವಿಚಕ್ಷಣೆ, ಎಲ್ಲರೂ ಮೆಚ್ಚುವಂತದ್ದು. ಶ್ರೀನಿವಾಸ ಮಲ್ಯರ ನಾಯಕತ್ವದಲ್ಲಿ ಜಿಲ್ಲೆಯ ಎಲ್ಲಾ ಜಾತಿಯ ಜನ ಜಂಗುಳಿಯಲ್ಲಿ ಧೈರ್ಯದ ನವಜೀವನವೇ ಉಕ್ಕಿ ಹರಿಯತೊಡಗಿತು. ಅವರು ಬಡಜನರನ್ನು ನಿರ್ಮಲವಾದ ಉದಾರತೆ, ಕರುಣೆಯಿಂದ ತಬ್ಬಿಕೊಂಡರು. ಹೀಗೆ ಶ್ರೀನಿವಾಸ ಮಲ್ಯರ ಹಿರಿಮೆಯನ್ನು ಸಮಾಜ ಸೇವೆಯನ್ನು ಹೊಗಳಿ ಅಂದಿನ ನವಯುಗ ಪತ್ರಿಕೆಯಲ್ಲಿ ಪ್ರಕಟಣೆಯೊಂದು ತಿಳಿಸಿದೆ[೬].

## ೪.೪. ಸಾರ್ವಜನಿಕ ಕೆಲಸಗಳನ್ನು ಮಾಡುವಾಗ ಮಲ್ಯರು ಎದುರಿಸಿದ ಬಿಕ್ಕಟ್ಟುಗಳು ಹಾಗೂ ಟೀಕೆಗಳು

ಶ್ರೀನಿವಾಸ ಮಲ್ಯರು ರಾಜಕೀಯ ವಲಯದಲ್ಲಿ ಇದ್ದುಕೊಂಡು, ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಪೂರಕವಾದ ಅನೇಕ ಕಾರ್ಯಕ್ರಮಗಳನ್ನು, ಸರಕಾರದಲ್ಲಿ ಅವರಿಗಿದ್ದ ನಿಕಟ ವ್ಯಕ್ತಿಗಳ ಸಂಪರ್ಕದಿಂದ, ದಿಲ್ಲಿಯಲ್ಲಿದ್ದುಕೊಂಡೇ ಜಿಲ್ಲೆಯ ಉದ್ಧಾರವನ್ನು ಮಾಡಿ ತೋರಿಸಿದವರು. ಆದರೆ ಅವರು ನಡೆದುಬಂದ ದಾರಿಯುದ್ದಕ್ಕೂ ಅನೇಕ ಸವಾಲುಗಳಿದ್ದವು. ಅವನ್ನೆಲ್ಲಾ ಸಮರ್ಥವಾಗಿ ಎದುರಿಸಿ ಬಂದವರು ಎಂದು ಹೇಳಬಹುದಾಗಿದೆ. ಮಂಗಳೂರು ಬಂದರು ನಿರ್ಮಾಣದ ಸಮಯದಲ್ಲಿ ಅವರು ಎದುರಿಸಿದ ವ್ಯಥೆಯು ಬಹಳ ದೊಡ್ಡದು. ಜಿಲ್ಲೆಯ ಉತ್ತರ ಭಾಗದಿಂದ

ಲೋಕಸಭೆಗೆ ಆರಿಸಿ ಹೋದ ಶ್ರೀನಿವಾಸ ಮಲ್ಯರು ತನ್ನ ಮತದಾರ ಕ್ಷೇತ್ರದ ಜನತೆಯನ್ನು ಆ ಪ್ರದೇಶದ ಜನರ ಅವಶ್ಯಕತೆಗಳನ್ನು ಕಡೆಗಣಿಸಿದ್ದರೆಂಬ ಕೂಗು ಕೂಡಾ ಕೇಳಿಬರುತ್ತಿತ್ತು. ಶ್ರೀನಿವಾಸ ಮಲ್ಯರು ಪಣಂಬೂರು ಪ್ರದೇಶವನ್ನೇ ಬಂದರು ನಿರ್ಮಾಣಕ್ಕೆ ಸೂಕ್ತ ಜಾಗವೆಂದು ತೀರ್ಮಾನಿಸಿದಾಗ ಅಲ್ಲಿನ ಜನರು ಶ್ರೀನಿವಾಸ ಮಲ್ಯರನ್ನು ಟೀಕಿಸಿರುವುದನ್ನು ಅಂದಿನ ನವಯುಗ ಪತ್ರಿಕೆಯಲ್ಲಿ ಪ್ರಕಟವಾದ ದಾಖಲೆಗಳಿವೆ.

ಮಂಗಳೂರಿನ ಕದ್ರಿಗುಡ್ಡೆಯಲ್ಲಿ ಸರ್ಕಿಟ್ ಹೌಸ್ ನಿರ್ಮಿಸಲು ಕರ್ನಾಟಕ ಸರಕಾರ (ಆಗ ಮೈಸೂರು) ನೀಲಿನಕಾಶೆ ತಯಾರಿಸಿ ಇಟ್ಟದ್ದನ್ನು ಪರಿಶೀಲಿಂಸಿದ ಶ್ರೀನಿವಾಸ ಮಲ್ಯರಿಗೆ ಅಸಮಾಧಾನವಾಗಿತ್ತು. ಯಾಕೆಂದರೆ ಆ ನೀಲಿನಕಾಶೆಯಲ್ಲಿ ಮಂತ್ರಿ ಮಾಗಧರಿಗೆ ಉಳಿದುಕೊಳ್ಳಲು ಮಾತ್ರ ವ್ಯವಸ್ಥೆ ಇತ್ತು ವಿನಃ ಸಾಮಾನ್ಯ ಜನರಿಗೆ, ಭೇಟಿಗಾಗಿ, ಸಂದರ್ಶನಕ್ಕಾಗಿ ಬಂದಾಗ ವರಾಂಡದಲ್ಲಿ ಸ್ಥಳದ ಕೊರತೆ ಇದ್ದುದನ್ನು ಗಮನಿಸಿ ಶ್ರೀನಿವಾಸ ಮಲ್ಯರು ಆ ನೀಲಿನಕಾಶೆಯ ಪ್ರತಿ ಮತ್ತು ಅನುದಾನದ ಬೇಡಿಕೆಯ ಪತ್ರಗಳನ್ನು ಅಭಿಯಂತರುಗಳಿಂದ ತರಿಸಿ ಬದಲಾವಣೆ ಮಾಡಿದ ನೀಲಿ ನಕಾಶೆಯನ್ನು ತಾವೇ ಸ್ವತಃ ಬೆಂಗಳೂರಿಗೆ ಒಯ್ದು, ತಾವು ಎಣಿಸಿಕೊಂಡಂತಹ ಸರ್ಕೂಟ್ ಹೌಸ್‌ನ ನೀಲಿ ನಕಾಶೆಯನ್ನು ಮಂಜೂರಾತಿ ಮಾಡಿಸಿ ತಂದರು. ತಮ್ಮ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಸಂದರ್ಭದಲ್ಲಿ ಎಷ್ಟೋ ಬಾರಿ ಶ್ರೀನಿವಾಸ ಮಲ್ಯರು ಅಭಿಯಂತರುಗಳನ್ನು ಕರೆದು ದಬಾಯಿಸಿದುದು ತಿಳಿದು ಬರುತ್ತದೆ. ಶ್ರೀನಿವಾಸ ಮಲ್ಯರ ಕಾರ್ಯ ವೈಖರಿಯೇ ಆ ರೀತಿಯಾಗಿತ್ತು. ತಾವು ಅನಿಸಿದ ಕಾರ್ಯವು ಮುಗಿಯುವವರೆಗೂ ಬೆನ್ನು ಬಿಡುತ್ತಿರಲಿಲ್ಲ. ಬಯಸಿದ್ದನ್ನು ಗೆದ್ದುಕೊಳ್ಳುವ ಶಕ್ತಿ ಅವರಲ್ಲಿತ್ತು. ಅವರ ಅಭಿಪ್ರಾಯವನ್ನು ಒಪ್ಪದವರು ಯಾರೂ ಇರಲಿಲ್ಲ.

ಹೀಗೆ ಶ್ರೀನಿವಾಸ ಮಲ್ಯರು ಜನರ – ಜನಪದದ ನಾಯಕ ಅದರೆ ಸರ್ವರೂ ಪೂಜಿಸುವ ವ್ಯಕ್ತಿ ಎನಿಸಲಿಲ್ಲ. ಶ್ರೀನಿವಾಸ ಮಲ್ಯರ ಬಗ್ಗೆ ಅಸಮಾಧಾನ ಪಟ್ಟವರೂ, ಅಸೂಯೆ ಪಟ್ಟವರೂ ಬಹಳಷ್ಟು ಮಂದಿ ಅಂದಿನ ಕಾಲದಲ್ಲಿರುವುದು ಕಂಡು ಬರುತ್ತದೆ. ಇದಕ್ಕೆ ಉದಾಹರಿಸುವುದಾದರೆ ಉಡುಪಿಯ ಬನ್ನಂಜೆ ರಾಮಾಚಾರ್ಯರು ತಮ್ಮ ಲೇಖನದಲ್ಲಿ ಶ್ರೀನಿವಾಸ ಮಲ್ಯರ ಬಗ್ಗೆ ಆ ದಿನಗಳಲ್ಲಿ ಶ್ರೀನಿವಾಸ ಮಲ್ಯರನ್ನು, ಅವರ ವಿಚಾರಧಾರೆಗಳನ್ನು ವಿರೋಧಿಸುವವರೂ ಇದ್ದರು ಎಂಬುದಾಗಿ ಬರೆಯುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಯಾಗಬೇಕು ಎಂದು ಶ್ರೀನಿವಾಸ ಮಲ್ಯರು ಪಣತೊಟ್ಟದ್ದರೆ, ಮಲ್ಪೆ ಪ್ರಭುದ್ಧ ಬಂದರ ಆಗಬೇಕು, ಮಣಿಪಾಲ ವಿಶ್ವವಿದ್ಯಾಲಯ ಕೇಂದ್ರವಾಗಬೇಕು, ಮಂಗಳೂರಿಗೆ ಬಂದು ನಿಂತ ರೈಲು ಉಡುಪಿಗೂ ಬರಬೇಕು ಎಂದು ಕನಸು ಕಾಣುತ್ತಿದ್ದ ಯುವಜನಾಂಗವು ಉಡುಪಿಯ ಉದಾತ್ತ ನಾಯಕರಾದ ಟಿ. ಎ. ಪೈಗಳನ್ನು ತಮ್ಮ ನಾಯಕರೆಂದು ಒಪ್ಪಿಕೊಂಡಿದ್ದರು. ರಾಷ್ಟ್ರದ ಉನ್ನತಿಗಾಗಿ ದುಡಿಯುವುದಕ್ಕೆ ಸಾಮಾನ್ಯವಾಗಿ ರಾಜಕಾರಣ ಎನ್ನುಲಾಗುತ್ತಿದ್ದ ಕಾಲ ಅದು. "ಉಡುಪಿಯ ಮತ ಪಡೆದು ಆ ಮೇಲೆ ಶ್ರೀನಿವಾಸ ಮಲ್ಯರು ಉಡುಪಿಯನ್ನು ಮರೆತು ಮಂಗಳೂರನ್ನೇ ಬೆಳೆಸಲು ಪ್ರಯತ್ನಿಸಿದ್ದಾರೆ, ಉಡುಪಿಯ ಆಸೆಗಳಿಗೆಲ್ಲಾ ಶ್ರೀನಿವಾಸ ಮಲ್ಯರು ಅಡ್ಡಿಯಾಗಿದ್ದಾರೆ" ಎಂದೂ ಜನರು ಶ್ರೀನಿವಾಸ ಮಲ್ಯರನ್ನು ಟೀಕಿಸಿದ್ದು ಕಂಡುಬರುತ್ತದೆ[೯].

೧೯೫೧ ರಲ್ಲಿ ದೇಶಭಕ್ತ ಕಾರ್ನಾಡು ಸದಾಶಿವರಾಯರ ಯೋಗ್ಯವಾದ ಸ್ಮಾರಕವೇರ್ಪಡಿಸುವ ಪ್ರಸ್ತಾವವೊಂದಿತ್ತು. ಜಿಲ್ಲಾ ಬೋರ್ಡು ಚುನಾವಣೆಗೆ ಕಾಂಗ್ರೆಸ್ ಪರವಾಗಿ ನಿಂತ ಉಮೇದ್ವಾರಿಗಳ ಡಿಪೋಜಿಟ್ ಹಣದಿಂದ ಖರ್ಚು ಕಳೆದು ಸುಮಾರು ರೂ.೯೦೦ ಉಳಿದಿತ್ತು. ಅದರಿಂದ ಸದಾಶಿವರಾಯರ ಸ್ಮಾರಕ ಸ್ಥಾಪಿಸಬೇಕೆಂದು ಹಲವರ ಬೇಡಿಕೆಯಾಗಿತ್ತು. ಆದರೆ ಕಮಲಾದೇವಿ ಚಟ್ಟೋಪಾಧ್ಯಾಯರು ಹಾಗೂ ಶ್ರೀನಿವಾಸ ಮಲ್ಯರು ಛಲತೊಟ್ಟು ಉಳಿದ ರೂ.೯೦೦ ಹಣವನ್ನೆಲ್ಲಾ ಒಂದು ಪುಸ್ತಕಭಂಡಾರ ಸ್ಥಾಪಿಸಲು ವಿನಿಯೋಗಿಸಬೇಕೆಂದು ಕಾರ್ಯನಿರ್ವಾಹಕ ಕಮಿಟಿಯಲ್ಲಿ ನಿರ್ಣಯ ತಂದಾಗ ಇದನ್ನು ಹಲವರು ವಿರೋಧಿಸಿದರು. ಕೆ. ಕೆ. ಶೆಟ್ಟಿಯವರು ೨೦೦ ರೂಪಾಯಿಯನ್ನು ಮಾತ್ರ ಪುಸ್ತಕ ಭಂಡಾರಕ್ಕಾಗಿ ಉಪಯೋಗಿಸಿ ಉಳಿದ ಹಣದಿಂದ ಸ್ಮಾರಕ ನಿರ್ಮಿಸಬೇಕೆಂದು ಒತ್ತಾಯಿಸಿದಾಗ ಇದನ್ನು ಕಮಲಾದೇವಿ ಹಾಗೂ ಶ್ರೀನಿವಾಸ ಮಲ್ಯರು ಒಪ್ಪದೇ ದೊಡ್ಡ ತರ್ಕವೇ ನಡೆದು ಕೊನೆಗೆ ಶ್ರೀ.ಕೆ.ಮಹಾಬಲ ಹೆಗ್ಡೆಯವರ ಉಪಸೂಚನೆಯ ಮೇರೆಗೆ ಜಿಲ್ಲಾ ಬೋರ್ಡು ಚುನಾವಣೆಯ ಬಾಬ್ತು ಡಿಪೋಜಿಟ್ ಹಣದಿಂದ ಖರ್ಚು ಕಳೆದು ಉಳಿದ ಹಣವನ್ನೆಲ್ಲಾ ಪುಸಕ್ತ ಭಂಡಾರಕ್ಕಾಗಿ ವಿನಿಯೋಗಿಸಬೇಕೆಂದು ಹಾಗೂ ಸದ್ರಿ ಪುಸ್ತಕ ಭಂಡಾರಕ್ಕೆ ದಿವಂಗತ ಕಾರ್ನಾಡು ಸದಾಶಿವರಾಯರ ಸ್ಮಾರಕ ಪುಸ್ತಕ ಭಂಡಾರವೆಂದು ಹೆಸರಿಡಬೇಕೆಂದು ಸರ್ವಸಮ್ಮತಿಯ ನಿರ್ಣಯವಾದಾಗ, ಪುಸ್ತಕ ಭಂಡಾರಕ್ಕಾಗಿ ರೂ.೯೦೦ ನ್ನು ವಿನಿಯೋಗಿಸಬೇಕೆಂದು ಛಲ ಹಿಡಿದ ಕಮಲಾದೇವಿಯವರೂ, ತಮ್ಮ ಮಾತು ಬದಲಾಯಿಸಿ ಹೇಗಾದರೂ ಮಾಡಿ ಪುಸ್ತಕ ಭಂಡಾರಕ್ಕೆ ಹಣ ವಿನಿಯೋಗಿಸಲ್ಪಡದಂತೆ ಪ್ರಯತ್ನ ನಡೆಸಿದರು. ಇವರೊಡನೆ ಶ್ರೀನಿವಾಸ ಮಲ್ಯರೂ ತಾಳ ಹಾಕುತ್ತಿದ್ದರು. ಹಾಗೂ ದೇಶಭಕ್ತ ಕಾರ್ನಾಡು ಸದಾಶಿವರಾಯರ ಪುಣ್ಯ ಹೆಸರನ್ನು ಗೌರವಿಸಿದ ರೀತಿಯನ್ನು ಟೀಕಿಸಿ ಕೆ. ಕೆ. ಶೆಟ್ಟರು ಹೆಸರಾಂತ ಪತ್ರಿಕೆ ನವಯುಗದಲ್ಲಿ ವ್ಯಕ್ತಪಡಿಸಿದರು. ಹೀಗೆ ಮಲ್ಯರಿಗೆ ರಾಜಕಾರಣದಲ್ಲಿ ದ್ವೇಷಿಸುವವರೂ ಇದ್ದರು ಎಂಬುದು ಸ್ಪಷ್ಟವಾಗುತ್ತದೆ. ಇಂತಹ ಹಲವು ನಿದರ್ಶನಗಳು ನಮಗೆ ಕಂಡು ಬರುತ್ತದೆ[೧೪].

ಕಾರ್ನಾಡು ಸದಾಶಿವರಾಯರ ನಂತರ ತ್ಯಾಗ ಮತ್ತು ಸೇವೆಯಲ್ಲಿ ಹೆಸರು ಪಡೆದ ಎಚ್.ರಾಮರಾಯ ಮಲ್ಯರಿಗೆ ಜಿಲ್ಲೆಯ ಕಾಂಗ್ರೆಸ್ ಕ್ಷೇತ್ರದಲ್ಲಿ ಸ್ಥಾನ ದೊರೆಯಬೇಕಾಗಿತ್ತು. ಇವರು ನಿಷ್ಠಾವಂತ ಕಾಂಗ್ರೆಸ್ ಧೋರಣೆಯನ್ನು ಪ್ರತಿಪಾದಿಸುವ, ವಿಶೇಷವಾಗಿ ಗಾಂಧಿವಾದವನ್ನು ಸರಿಯಾಗಿ ಪ್ರಚಾರ ಮಾಡುವ ಉದ್ದೇಶದಿಂದ ಬಹಳವಾಗಿ ದುಡಿದು, ಕಟ್ಟಿದ ಸ್ವತಂತ್ರ ಭಾರತವು ಶ್ರೀನಿವಾಸ ಮಲ್ಯ ಹಾಗೂ ಕಮಲಾದೇವಿಯವರ ವಾಹನವಾಗಿ ಪರಿಣಮಿಸಿದೆ ಎಂದು ಕೆ. ಕೆ. ಶೆಟ್ಟರು ಹೆಸರಾಂತ ಪತ್ರಿಕೆ ರಾಷ್ಟ್ರಬಂಧುವಿನಲ್ಲಿ ಪ್ರಕಟಿಸಿದ್ದರು. ದೇಶಕ್ಕಾಗಿ ದುಡಿದ ರಾಮರಾಯ ಮಲ್ಯರು ಕೊನೆಗಾಲದಲ್ಲಿ ವೃದ್ಧ ತಂದೆ ತಾಯಿ ಹಾಗೂ ಹೆಂಡತಿ ಮಕ್ಕಳಿಗೆ ಏನನ್ನೂ ಮಾಡದೇ ತಮ್ಮ ಸರ್ವಸ್ವವನ್ನೂ ದೇಶಕ್ಕೆ ಅರ್ಪಿಸಿದ್ದರೂ ಕ್ಷಣಮಾತ್ರದಲ್ಲೆಂಬಂತೆ ಸ್ವತಂತ್ರ ಭಾರತದಿಂದ ಹೊರದೂಡಿದರು ಎಂಬುದಾಗಿ ಕಮಲಾದೇವಿ ಹಾಗೂ ಶ್ರೀನಿವಾಸ ಮಲ್ಯರ ಹೃದಯ ಹೀನತೆಯ ಕುರಿತು ಪತ್ರಿಕೆಯಲ್ಲಿ ಪ್ರಕಟವಾಗಿತ್ತು[೧೯].

ಹೀಗೆ ಶ್ರೀನಿವಾಸ ಮಲ್ಯರು ಬಹಳಷ್ಟು ಸಂಕಷ್ಟಗಳನ್ನೂ, ಅಪಪ್ರಚಾರಗಳನ್ನೂ ಎದುರಿಸಿದ ಹಲವಾರು

ನಿದರ್ಶನಗಳು ನಮಗೆ ತಿಳಿದುಬರುತ್ತದೆ. ಗೌಡಸಾರಸ್ವತ ಬಂಧುಗಳಲ್ಲಿ, ಕಮಲಾದೇವಿ ಹಾಗೂ ಶ್ರೀನಿವಾಸ ಮಲ್ಯರನ್ನು ವಿಚಾರಿಸಿ ನಡೆಯಬೇಕೆಂದು ಹಾಗೂ ಇವರಿಬ್ಬರು ತಮ್ಮ ಸ್ಥಾನಮಾನಕ್ಕಾಗಿ ಜಿಲ್ಲೆಯ ಕಾಂಗ್ರೆಸ್ ಕ್ಷೇತ್ರದೊಳಗೂ ಜಾತೀಯತೆಯ ಕ್ಷಯರೋಗವನ್ನು ಹಬ್ಬಿಸುತ್ತಾರೆಂದೂ, ಶ್ರೀನಿವಾಸ ಮಲ್ಯರು ತಮ್ಮ ಬೇಳೆ ಬೇಯಿಸುವ ಸಲುವಾಗಿ ಜಾತೀಯತೆಯ ಕಿಚ್ಚೆಬ್ಬಿಸುತ್ತಾರೆಂದೂ, ನಾನಾ ತಂತ್ರಗಳಿಂದ, ಅಪಪ್ರಚಾರಗಳಿಂದ, ಕುಟಿಲ ನೀತಿಯಿಂದ ಸಮಾಜ ಬಾಂಧವರಿಗೆ ಮಂಕುಬೂದಿ ಬಳೆದಿದ್ದಾರೆಂದೂ, ಕಾಂಗ್ರೆಸ್‌ನೊಳಗೆ ರಾಷ್ಟ್ರೀಯತೆಯ ಸೋಗಿನಲ್ಲಿ ನೈತಿಕ ಅಧೋಗತಿಯನ್ನುಂಟು ಮಾಡಿದ್ದಾರೆಂದು, ಶ್ರೀನಿವಾಸ ಮಲ್ಯರನ್ನು ಹಾಗೂ ಜೊತೆಗೆ ಕಮಲಾದೇವಿಯವರನ್ನೂ ಕುರಿತ ಅಪಪ್ರಚಾರಗಳು ಅನೇಕ ಬಾರಿ ದಿನಪತ್ರಿಕೆಯಲ್ಲಿ ಪ್ರಕಟವಾಗಿರುವುದಕ್ಕೆ ದಾಖಲೆಗಳಿವೆ[೨೦].

ಶ್ರೀನಿವಾಸ ಮಲ್ಯರನ್ನು ದೂಷಿಸಿರುವ ಮತ್ತೊಂದು ನಿದರ್ಶನವೆಂದರೆ ಕುಂದಾಪುರ ತಾಲೂಕಿನಿಂದ ಸ್ಪರ್ದಿಸಿದ ಸೂರಪ್ಪಯ್ಯನವರು ಆರಿಸಿಬರಬಾರದೆಂಬ ಕಮಲಾದೇವಿಯವರ ಪ್ರಯತ್ನದಲ್ಲಿ, ಶ್ರೀನಿವಾಸ ಮಲ್ಯರದ್ದೂ ಕೈವಾಡವಿದೆ ಎಂದು ಕೆ. ಕೆ. ಶೆಟ್ಟರು, ಪತ್ರಿಕೆಯಲ್ಲಿ ಶ್ರೀನಿವಾಸ ಮಲ್ಯರನ್ನು ಕುರಿತು ಟೀಕಿಸಿದ್ದಾರೆ. ಕೆ. ಕೆ. ಶೆಟ್ಟರಿಗೂ ಸೂರಪ್ಪಯ್ಯನವರಿಗೆ ಓಟು ಕೊಡುವುದು ಬೇಡವೆಂದು, ಪುಸಲಾಯಿಸಿದ್ದು, ಅವರ ಸೂತ್ರ ಚಾಲನೆ ಅರಿಯದೆ ಕೆ.ಕೆ.ಶೆಟ್ಟರು ಓಟು ಕೊಡದೆ ಒಂದು ಓಟಿನಿಂದ ಸೂರಪ್ಪಯ್ಯನವರು ಸೋತುಹೋದದ್ದು, ಅವರ ಎದುರಾಳಿ ಸುಬ್ಬಣ್ಣ ಶೆಟ್ಟರು ಜಯಶಾಲಿಯಾದಾಗ, ಕೆ. ಕೆ. ಶೆಟ್ಟಿಯವರು ಮಲ್ಯರನ್ನು "ವಿಶ್ವಾಸ ಘಾತುಕ ಮಾಡಿದಿರಿ" ಎಂದು ದೂಷಿಸಿದ್ದು, ಶ್ರೀನಿವಾಸ ಮಲ್ಯರು ಸೂರಪ್ಪಯ್ಯನವರನ್ನು ಹೊರಹಾಕಲು ಸಂಚು ನಡೆಸಿದರೆಂಬುದು ಪತ್ರಿಕೆಯಲ್ಲಿ ಪ್ರಕಟವಾಗಿತ್ತು ಎಂಬುದಕ್ಕೆ ದಾಖಲೆಗಳಿವೆ[೨೧].

ಹೀಗೆ ಶ್ರೀನಿವಾಸ ಮಲ್ಯರು ರಾಜಕೀಯದಲ್ಲಾಗಲಿ, ಸಾಮಾಜಿಕ ವಲಯದಲ್ಲಾಗಲಿ ಬಹಳಷ್ಟು ಟೀಕೆಗಳನ್ನು ಎದುರಿಸಿದ್ದಾರೆ. ಆದರೆ ಯಾವುದಕ್ಕೂ ಎದೆಗುಂದದೆ ತಾವು ಹಾಕಿದ ಯೋಜನೆಗಳ ಕಡೆಗೆ ದಿಟ್ಟ ಹೆಜ್ಜೆಯನ್ನಿಡುತ್ತಾ ಮುಂದೆ ಸಾಗಿದರು. ಶ್ರೀನಿವಾಸ ಮಲ್ಯರು ಜಿಲ್ಲೆಯ ಅಭಿವೃದ್ಧಿಗಾಗಿ ದುಡಿದ, ಹಾಗೂ ಅವರ ಸಾಧನೆಯಿಂದ ವಿಸ್ಮಿತರಾದ ಹಲವು ಜನರು ಶ್ರೀನಿವಾಸ ಮಲ್ಯರನ್ನು ಹಾಗೂ ಅವರ ಕಾರ್ಯ ವೈಖರಿಯನ್ನು ಪ್ರಶಂಸಿಸಿದ್ದೂ ಕಂಡುಬರುತ್ತದೆ.

**೪.೫. ಮುಕ್ತಾಯ**

ಶ್ರೀನಿವಾಸ ಮಲ್ಯರ ವ್ಯಕ್ತಿತ್ವ ಮತ್ತು ಸಾಧನೆಗಳಿಂದ ಪ್ರೇರಿತರಾದವರಲ್ಲಿ ಡಾ. ಟಿ. ಎಂ. ಎ.ಪೈಯವರೂ ಒಬ್ಬರು ಎಂದು ಹೇಳಿದರೆ ತಪ್ಪಾಗಲಾರದು. ಶ್ರೀನಿವಾಸ ಮಲ್ಯರನ್ನೂ, ಅವರ ಸಾಧನೆಯನ್ನೂ, ಹಾಗೂ ದಕ್ಷಿಣ ಕನ್ನಡ ಜಿಲ್ಲೆಗೆ ಅವರು ನೀಡಿದ ಕೊಡುಗೆಯಿಂದ ಆಕರ್ಷಿತರಾದ ಟಿ. ಎಂ. ಎ. ಪೈಗಳು ತಮ್ಮ ಜಿಲ್ಲೆಯಾದ ಉಡುಪಿಗೂ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಯಶಸ್ವಿಯಾದರು. ಮುಂದಿನ ಅಧ್ಯಾಯದಲ್ಲಿ ಮಣಿಪಾಲದ

ಶಿಲ್ಪಿಯಾಗಿ ಹೆಸರು ಪಡೆದ ಡಾ ಟಿ. ಎಂ. ಎ. ಪೈಯವರ ಸಾಧನೆಗೊಂದಿಗೆ ಶ್ರೀನಿವಾಸ ಮಲ್ಯರ ಸಾಧನೆಗಳನ್ನು ತುಲನೆ ಮಾಡಿ, ಅವರಿಬ್ಬರ ವ್ಯಕ್ತಿ ವಿಶೇಷತೆಯನ್ನು ತಿಳಿಯುವ ಪ್ರಯತ್ನ ಮಾಡಲಾಗುತ್ತದೆ.

## ಪರಾಮರ್ಶನ ಗ್ರಂಥಗಳು ಹಾಗೂ ಸಂದರ್ಶಕರ ವಿವರಗಳು


೧. ಏಚ್ಚಾರ್ಕೆ; 'ಅಭಿವೃದ್ಧಿ ಅರ್ಥಶಾಸ್ತ್ರ'', ಸಪ್ನ ಬುಕ್ ಹೌಸ್, ಬೆಂಗಳೂರು, ಪುಟ–೧೯.

೨. ಅದೇ, ಪುಟ–೭, ೪೧.

೩. ಅದೇ, ಪುಟ–೯, ೭.

೪. ಸಂದರ್ಶನ: ಜನಾರ್ಧನ ಪ್ರಭು; ಪ್ರೀತಿ ಅಪಾರ್ಟ್‌ಮೆಂಟ್ಸ್, ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ ೧೫–೭–೨೦೧೦.

೫. ಸಂದರ್ಶನ: ಜನಾರ್ಧನ ಪ್ರಭು; ಪ್ರೀತಿ ಅಪಾರ್ಟ್‌ಮೆಂಟ್ಸ್, ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ ೨೧–೦೭–೨೦೧೦.

೬. ಸಂದರ್ಶನ: ಜನಾರ್ಧನ ಪ್ರಭು; ಪ್ರೀತಿ ಅಪಾರ್ಟ್‌ಮೆಂಟ್ಸ್, ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ ೧೯–೭–೨೦೧೦.

೭. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಎ.ಕೆ.ಮೊನ್ನಪ್ಪ ಪ್ರಕಾಶನ, ೨೦೦೩, ಮಂಗಳೂರು, ಪುಟ–೮.

೮. ಅದೇ, ಪುಟ–೭೪, ೭೫.

೯. ಸಂದರ್ಶನ: ಬಸ್ತಿ ವಾಮನ ಶೆಣೈ; ಬಸ್ತಿ ಗಾರ್ಡನ್ಸ್, ತುಂಬೆ, ಬಂಟವಾಳ, ದಿನಾಂಕ, ೩೦–೭–೨೦೧೦.

೧೦. ಸಂದರ್ಶನ: ಮನೋಹರ ಪ್ರಸಾದ್, ಉದಯವಾಣಿ ಪತ್ರಿಕೆ ವಿಭಾಗ, ಮಾನಸ ಟವರ್ಸ್, ಮಂಗಳೂರು, ದಿನಾಂಕ ೧–೪–೨೦೧೦.

೧೧. ೧೧. ಸಂದರ್ಶನ: ಪ್ರಭಾಕರ ಜೋಶಿ, ಉಪನ್ಯಾಸಕರು, ಬಿಜೈ, ಮಂಗಳೂರು, ದಿನಾಂಕ ೨೦–೭–೨೦೧೦.

೧೨. 'ನವಯುಗ' ದಿನ ಪತ್ರಿಕೆ, ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಸಂಪುಟ–೯, ದಿನಾಂಕ –೩೧–೧೨–೧೯೬೪.

೧೩. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಎ. ಕೆ. ಮೊನ್ನಪ್ಪ ಪ್ರಕಾಶನ, ದ.ಕ., ಪುಟ–೯, ೧೦.

೧೪. ಸಂದರ್ಶನ: ಜನಾರ್ಧನ ಪ್ರಭು, ಪ್ರೀತಿ ಅಪಾರ್ಟ್‌ಮೆಂಟ್ಸ್, ಮಂಗಳೂರು, ದಿನಾಂಕ–೨೭–೭–೨೦೧೦.

೧೫. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ ಎ.ಕೆ.ಮೊನ್ನಪ್ಪ ಪ್ರಕಾಶನ,೨೦೦೩, ಮಂಗಳೂರು, ೨೦೦೩, ಪುಟ ೩೯.

೧೬. ನವಯುಗ' ದಿನಪತ್ರಿಕೆ, ರಾಷ್ಟ್ರ ಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಫೆಬ್ರವರಿ ೧೭, ೧೯೫೫. ಸಂಚಿಕೆ.

೧೭. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಎ.ಕೆ. ಮೊನ್ನಪ್ಪ ಪ್ರಕಾಶನ, ಮಂಗಳೂರು ೨೦೦೩, ಪುಟ–೧೯, ೨೦, ೨೧.

೧೮. 'ನವಯುಗ' ದಿನಪತ್ರಿಕೆ, ರಾಷ್ಟ್ರ ಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೧೯೪೭, ಸಂಚಿಕೆ ೨೦, ಪುಟ ೧೭.

೧೯. 'ರಾಷ್ಟ್ರ ಬಂಧು', ದಿನಪತ್ರಿಕೆ, ಗೋವಿಂದ ಪೈ ಸಂಶೋಧನಾ ಕೆಂದ್ರ, ಉಡುಪಿ ಸಂಚಿಕೆ ೨೭, ಪುಟ ೩೦.

೨೦ 'ರಾಷ್ಟ್ರ ಬಂಧು', ದಿನಪತ್ರಿಕೆ, ಗೋವಿಂದ ಪೈ ಸಂಶೋಧನಾ ಕೆಂದ್ರ, ಉಡುಪಿ ೧೯೫೦, ಪುಟ ೬೯.

೨೧ 'ರಾಷ್ಟ್ರ ಮತ', ದಿನಪತ್ರಿಕೆ, ಗೋವಿಂದ ಪೈ ಸಂಶೋಧನಾ ಕೆಂದ್ರ, ಉಡುಪಿ, ೧೯೩೮, ಪುಟ–೧೩.

# ಅಧ್ಯಾಯ – ೫

## ತೋನ್ಸೆ ಮಾಧವ ಅನಂತ ಪೈ (ಡಾ. ಟಿ. ಎಂ. ಎ. ಪೈ) ಯವರ ಸಾಧನೆಗಳೊಂದಿಗೆ ಶ್ರೀನಿವಾಸ ಮಲ್ಯರ ಸಾಧನೆಗಳ ತುಲನೆ

# ಅಧ್ಯಾಯ – ೫

# ತೋನ್ಸೆ ಮಾಧವ ಅನಂತ ಪೈ (ಡಾ. ಟಿ. ಎಂ. ಎ. ಪೈ) ಯವರ ಸಾಧನೆಗಳೊಂದಿಗೆ ಶ್ರೀನಿವಾಸ ಮಲ್ಯರ ಸಾಧನೆಗಳ ತುಲನೆ

## ೫.೧. ಶ್ರೀನಿವಾಸ ಮಲ್ಯರು ಹಾಗೂ ಅವರ ಒಟ್ಟು ಸಾಧನೆಗಳು

ಅಧ್ಯಾಯ ೪ ರಲ್ಲಿ ಶ್ರೀನಿವಾಸ ಮಲ್ಯರು ದಕ್ಷಿಣ ಕನ್ನಡ ಜಿಲ್ಲೆಗೆ ನೀಡಿದ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಕೊಡುಗೆಗಳನ್ನು ಗಮನಿಸಿದಾಗ, ಅವರಂತಹ ಅಪರಿಮಿತ ಗುಣಗಳಿಂದ, ಕೂಡಿದ ನಾಯಕರು ಪ್ರಸ್ತುತ ಪೀಳಿಗೆಯಲ್ಲಿ ಬಹಳ ವಿರಳ ಎಂದು ಹೇಳಬಹುದಾಗಿದೆ. ಶ್ರೀನಿವಾಸ ಮಲ್ಯರ ಕಾರ್ಯಕುಶಲತೆಯ ಚುರುಕುತನ, ಗ್ರಹಣಶಕ್ತಿ, ಧೈರ್ಯ, ಉತ್ಸುಕತೆ, ಜನರನ್ನು ಚುರುಕುಗೊಳಿಸುವ ಕಾರ್ಯ ಚತುರತೆ, ಹಾಗೂ ಎಂತಹ ಸನ್ನಿವೇಶದಲ್ಲಿಯೂ ಧೈರ್ಯಗೆಡದೆ ಮುನ್ನುಗ್ಗುವ ಸಾಹಸ ಇವೆಲ್ಲವನ್ನು ಗಮನಿಸಿದಾಗ, ಶ್ರೀನಿವಾಸ ಮಲ್ಯರು ಎಲ್ಲಾ ವಿಧದಲ್ಲಿಯೂ ನಾಯಕನಾಗುವ ಅರ್ಹತೆಯನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ. ಅವರ ದೊಡ್ಡ ಗುಣವೆಂದರೆ, ವಿಧೇಯತೆ, ಜನರ ಒಳಿತಿಗಾಗಿ ಅತೀ ಕಳಕಳಿ ಮತ್ತು ದೃಢ ನಿಷ್ಟೆಯಿಂದ ಕಾರ್ಯ ನಿರ್ವಹಿಸಿತ್ತಿದ್ದುದು ಹಾಗೂ ಎಂತಹ ಕಾರ್ಯವನ್ನು ವಹಿಸಿದರೂ ಅತೀ ಶ್ರದ್ಧೆಯಿಂದ ನಿಭಾಯಿಸುವ ಗುಣ ಎಲ್ಲರೂ ಮೆಚ್ಚುವಂತದ್ದೇ ಎಂದು ಹೇಳಬಹುದಾಗಿದೆ. ಶ್ರೀನಿವಾಸ ಮಲ್ಯರವರ ಬಹುವಿಧದ ರಚನಾತ್ಮಕ ಕಾರ್ಯಗಳಿಂದ ಇಂದು ದಕ್ಷಿಣ ಕನ್ನಡ ಜಿಲ್ಲೆಯು ಎಲ್ಲರ ಕಣ್ಣಿಗೆ ರಾಚುವಂತೆ ಎದ್ದು ಕಾಣುತ್ತಿದೆ ಎಂಬುದರಲ್ಲಿ ಸಂಶಯವೇ ಇಲ್ಲ. ಅವರು ಬಹುಮುಖ ಪ್ರತಿಭೆಯಾಗಿದ್ದರು ಎಂಬುದಕ್ಕೆ, ಅವರು ತಮ್ಮ ಮನೆಯಲ್ಲಿ ಗುಡಿ ಕೈಗಾರಿಕೆಯ ಮತ್ತು ಸಂಗ್ರಹಾಲಯವನ್ನು ಇಟ್ಟುಕೊಂಡಿದ್ದೇ ಸಾಕ್ಷಿಯಾಗಿದೆ. ಪ್ರತಿಭೆಯಲ್ಲಿ, ದೂರದೃಷ್ಟಿಯಲ್ಲಿ, ಕ್ರಿಯಾಶೀಲತೆಯಲ್ಲಿ ಶ್ರೀನಿವಾಸ ಮಲ್ಯರನ್ನು ಮೀರಿದವರು ಕೈಬೆರಳೆಣಿಕೆಯಲ್ಲಿ ಸಿಗಬಹುದೇನೊ! ಇಂತಹ ಶ್ರೇಷ್ಟ ವ್ಯಕ್ತಿಯೊಬ್ಬನ್ನು ರಾಷ್ಟ್ರಕ್ಕೆ ನೀಡಿದ ಹೆಮ್ಮೆಯು ಕರಾವಳಿಗೆ ಲಭಿಸಿದೆ ಎಂಬುದು ತಿಳಿದು ಬರುತ್ತದೆ[1].

ಶ್ರೀನಿವಾಸ ಮಲ್ಯರ ಚುರುಕಾದ ಮಾತು, ಚಾತುರ್ಯಪೂರ್ಣ ಕ್ರೌರ್ಯಶೀಲತೆ, ರಾಷ್ಟ್ರನಾಯಕ ಪಟ್ಟ ಏರಿದ ದೃಢ ನಿಲುಮೆಯ ಉನ್ನತ ವ್ಯಕ್ತಿತ್ವ, ಆಹೋರಾತ್ರಿ ಜನಪದದ ಏಳಿಗೆಗಾಗಿ ಶ್ರಮಿಸುವ ತಪಶ್ಯಕ್ತಿ, ನಿಸ್ವಾರ್ಥವಾದ ಸಾಚಾ ಸರಳತನ, ಎಲ್ಲಕ್ಕೂ ಮಿಗಿಲಾಗಿ ಅವರ ನಿರ್ಮಲವೂ, ಪ್ರಾಮಾಣಿಕವೂ ಆದ ನಡತೆ ಇವೆಲ್ಲವನ್ನು ನೆನೆದಾಗ ಮೈನವಿರೇಳುವಂತಾಗುತ್ತದೆ. ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ಶ್ರೀನಿವಾಸ ಮಲ್ಯರಷ್ಟು ಕೊಡುಗೆಗಳನ್ನಿತ್ತವರು ಯಾರೂ ಇರಲಾರರೆಂದರೂ ತಪ್ಪಿಲ್ಲ. ಅವರಲ್ಲಿದ್ದ ಆ ತವರೂರಿನ ಅಭಿವೃದ್ಧಿಯ ಕಳಕಳಿ, ಹಾಗೂ ಅನೇಕ

ಜನೋಪಯೋಗಿ ಕೆಲಸಗಳು, ವಿದ್ಯೆ, ಉದ್ಯೋಗ, ಕೈಗಾರಿಕೀಕರಣ ಮೊದಲಾದ ಆಧುನಿಕ ಸೌಲಭ್ಯಗಳು ಜನತೆಗೆ ದೊರೆಯುವಂತೆ ಮಾಡಿದ ಹಾಗೂ ಜನತೆಯ ಉನ್ನತಿಗಾಗಿ ಶ್ರಮಿಸಿ, ಏನೂ ಪ್ರಚಾರ ಬಯಸದೆ, ಅಧಿಕಾರ ಹೊಂದುವ ಅಪೇಕ್ಷೆ ಮಾಡದೆ, ಜನತೆಯ ನಾಡಿ ಮಿಡಿತವನ್ನು ಅರಿತು, ದಕ್ಷಿಣ ಕನ್ನಡ ಜಿಲ್ಲೆಯ ಏಳಿಗೆಗೆ ಅಪಾರ ಕೊಡುಗೆಗಳನ್ನು ನೀಡಿದ ಆ ಮಹಾತ್ಮರನ್ನು ನೆನೆಯುವುದೇ ನಮ್ಮ ಪಾಲಿಗೆ ಸೌಭಾಗ್ಯ. ಶ್ರೀನಿವಾಸ ಮಲ್ಯರಿಗೆ ತಾವು ಸಾಧಿಸುವ ಗುರಿಗಳ ಆದ್ಯತೆಯ ಕುರಿತು ಸಾಕಷ್ಟು ಪೂರ್ವ ತಯಾರಿಗಳಿದ್ದವು, ಹಾಗೂ ಅಗತ್ಯವಿದ್ದಲ್ಲಿ ಕಠಿಣ ಹೆಜ್ಜೆಗಳನ್ನು ಇಡಲು ಶ್ರೀನಿವಾಸ ಮಲ್ಯರು ಹಿಂದೆ ಮುಂದೆ ನೋಡುತ್ತಿರಲಿಲ್ಲವೆಂಬುದು ತಿಳಿದು ಬರುತ್ತದೆ. ಅಂದಿನ ಮುಂಚೂಣಿಯಲ್ಲಿದ್ದ ನಾಯಕರ, ರಾಷ್ಟ್ರದ ಭವಿಷ್ಯ ನಿರ್ಮಾಪಕರ ಗೆಳೆತನ ಮತ್ತು ಅವರೊಂದಿನ ಒಡನಾಟಗಳನ್ನು ಸ್ವಹಿತಕ್ಕಾಗಿ, ಸ್ವಜನರ, ಬಂಧುಬಳಗದವರ ಆರ್ಥಿಕ, ಸಾಮಾಜಿಕ ಉದ್ಧಾರಕ್ಕಾಗಿ ಅಥವಾ ತನ್ನ ಸ್ಥಾನ ಭದ್ರಪಡಿಸಿಕೊಳ್ಳಲಿಕ್ಕಾಗಿ ಉಪಯೋಗಿಸಿದವರಲ್ಲ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ದೇವರಲ್ಲಿ ಅಗಾಧ ವಿಶ್ವಾಸ, ಧಾರ್ಮಿಕ ಶಾಸ್ತ್ರ ವಿಧಿಗಳಲ್ಲಿ ಅಪಾರ ನಂಬುಗೆ ಇರಿಸಿಕೊಂಡಿದ್ದ ಶ್ರೀನಿವಾಸ ಮಲ್ಯರು ಮಂಗಳೂರಿನ ರಥಬೀದಿಯ ಶ್ರೀ ವೆಂಕಟರಮಣ ಸ್ವಾಮಿ ದೇವಸ್ಥಾನದ ಎದುರಿಗೆ ಅಶ್ವಥ ಗಿಡವನ್ನು ನೆಟ್ಟು ಕಟ್ಟೆಯೊಂದನ್ನು ಕಟ್ಟಿಸಿರುವುದು ತಿಳಿದು ಬರುತ್ತದೆ. ಇಂದು ಈ ಮರವು ಬ್ರಹದಾಕಾರವಾಗಿ ಬೆಳೆದು ಶ್ರೀನಿವಾಸ ಮಲ್ಯರ ನೆನಪನ್ನು ಮಾಡುತ್ತದೆ. ಹೀಗೆ ಶ್ರೀನಿವಾಸ ಮಲ್ಯರು ನಾಡಿಗೆ, ಜನತೆಗೆ ಹಿತಗಳನ್ನುಂಟುಮಾಡುವ ಕಾರ್ಯಗಳನ್ನು ನೆರವೇರಿಸಿ ಕೀರ್ತಿಶೇಷರಾದರು. ನಾಡಿಗಾಗಿ ಜನತೆಗಾಗಿ ಇಂದಿನ ಮುತ್ತು ಮುಂದಿನ ಜನಾಂಗಕ್ಕೆ ಉತ್ತಮ ಸ್ಫೂರ್ತಿ ಕೊಡುವ, ಅನುಪಮ ತ್ಯಾಗಮಾಡಿ ಹೋರಾಡಿದ ಹೆಗ್ಗಳಿಕೆಗೆ ಶ್ರೀನಿವಾಸ ಮಲ್ಯರು ಪಾತ್ರರಾಗಿದ್ದಾರೆ. ಶ್ರೀನಿವಾಸ ಮಲ್ಯರು ದಕ್ಷಿಣ ಕನ್ನಡ ಜಿಲ್ಲೆಯ ಸಾರ್ವಜನಿಕ ಜೀವನದಲ್ಲಿ ಗಣ್ಯ, ಸ್ಮರಣೀಯ, ಅನುಕರಣೀಯ ಸ್ವಭಾವ ಮತ್ತು ವ್ಯಕ್ತಿತ್ವ ಹೊಂದಿದ್ದರು. ನಿಸ್ವಾರ್ಥ ಸೇವಾಭಾವ, ಉಜ್ವಲ ದೇಶಾಭಿಮಾನ ಮತ್ತು ಉದಾರ ಜನ ಪ್ರೇಮದಂತಹ ವಿಶಿಷ್ಟ ಗುಣ ಹೊಂದಿದ್ದ ಶ್ರೀನಿವಾಸ ಮಲ್ಯರು ಅಸಾಧ್ಯ ಕಾರ್ಯಗಳನ್ನೆಲ್ಲಾ ಸಾಧಿಸಿ ಜೀವನ ಸಾಫಲ್ಯ ಹೊಂದಿದವರು. ಕೇಂದ್ರದಲ್ಲಿ ಶ್ರೀನಿವಾಸ ಮಲ್ಯರಿಗಿದ್ದ ನಿಕಟ ಸಂಪರ್ಕವನ್ನು, ಹಾಗೂ ಪ್ರಭಾವವನ್ನು ಎಂದಿಗೂ ತನ್ನ ಸ್ವಂತ ಲಾಭಕ್ಕಾಗಿ, ಹೆಸರಿಗಾಗಿ ಬಳಸದ ಶ್ರೀನಿವಾಸ ಮಲ್ಯರು, ಎಲ್ಲವನ್ನೂ ಕರ್ನಾಟಕ ರಾಜ್ಯ ಹಾಗೂ ತನ್ನ ಜಿಲ್ಲೆಯಾದ ದಕ್ಷಿಣ ಕನ್ನಡಕ್ಕೆ ಧಾರೆ ಎರೆದಿರುವುದು ಗಮನಾರ್ಹ. ಇಂತಹ ನಿಸ್ವಾರ್ಥ ಸೇವಾ ಮನೋಭಾವವನ್ನು ಹೊಂದಿದ ಶ್ರೀನಿವಾಸ ಮಲ್ಯರಂತಹ ವ್ಯಕ್ತಿತ್ವವನ್ನು ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಣುವುದು ಅಪರೂಪ ಮಾತ್ರವಲ್ಲ ಇಂದಿನ ಯುವ ಪೀಳಿಗೆಯ ನಾಯಕತ್ವದಲ್ಲಿ ಅವರ ಗುಣಗಳು ಕಾಣುವುದಿಲ್ಲ. ವಿಧೇಯತೆ, ಸ್ನೇಹಪರತೆ, ನೈಜ್ಯ ಕಳಕಳಿ ಮುಂತಾದ ವಿಶಿಷ್ಟ ಗುಣಗಳು ಶ್ರೀನಿವಾಸ ಮಲ್ಯರನ್ನು ಎಂತಹ ಕಠಿಣ ಕೆಲಸವನ್ನು ಧೈರ್ಯದಿಂದ ಮಾಡಿ ಮುಗಿಸುವುದಕ್ಕೆ ಸಾಧ್ಯವಾಗುತ್ತಿತ್ತು. ಕಾಮಗಾರಿಗಳ ನಿರ್ಮಾಣದ ಶಿಲ್ಪಿಯೆನಿಸಿದ ಶ್ರೀನಿವಾಸ ಮಲ್ಯರು ಎಲ್ಲವನ್ನೂ ಸಾರ್ವಜನಿಕರಿಗಾಗಿಯೇ ಮಾಡಿದರು. ಕೊನೆಯವರೆಗೂ ಒಂದು ಸ್ವಂತ ಮನೆಯನ್ನೂ ಮಾಡದೇ ಬಾಡಿಗೆ ಮನೆಯಲ್ಲೇ ಕಾಲ ಕಳೆದರು. ಈ ಜಿಲ್ಲೆಯ ಉದ್ದಗಲಗಳಲ್ಲಿ ಯಾವುದೇ ಹಳ್ಳಿಗಾಡಿಗೆ ಹೋದರೂ ಒಂದು ಮಾರ್ಗ, ಒಂದು ಸೇತುವೆ ಶ್ರೀನಿವಾಸ ಮಲ್ಯರ ಹೆಸರನ್ನು ನೆನಪಿಸುತ್ತದೆ. ಹಾಗೆಂದು

ಎಲ್ಲೆಂದರಲ್ಲಿ ಶ್ರೀನಿವಾಸ ಮಲ್ಯರ ಹೆಸರಿನ ಶಿಲಾಫಲಕವನ್ನು ನಾವು ಕಾಣುವುದಿಲ್ಲ. ಎಂತಹ ವಿಶಿಷ್ಟ ವ್ಯಕ್ತಿತ್ವ ಅವರದೆಂದರೆ ಸದ್ದುಗದ್ದಲಗಳಿಲ್ಲದೆ ಜನೋಪಯೋಗಿ ಕೆಲಸಗಳನ್ನು ಮಾಡುವುದರಲ್ಲೇ ತೃಪ್ತಿ ಕಂಡು ತನ್ನ ಬದುಕನ್ನು ಸಾರ್ಥಕ ಮಾಡಿಕೊಂಡ ಒಬ್ಬ ಅಪರೂಪದ ನಾಯಕರು. ಲಾಭಲೋಭಗಳ ನೆಲೆಯಲ್ಲಿ ಎಳ್ಳಿನಿತೂ ಕಳಂಕರಹಿತವಾದ, ಹಾಗೂ ಜನಪದವೇ ಶ್ರೀನಿವಾಸ ಮಲ್ಯರ ಮೊದಲ ಮತ್ತು ಕೊನೆಯ ಗುರಿಯಾಗಿತ್ತು ಎಂಬುದು ಅವರ ವಿಶಿಷ್ಟ ವ್ಯಕ್ತಿತ್ವವನ್ನು ಸಾರಿ ಹೇಳುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉಳ್ಳಾಲ ಶ್ರೀನಿವಾಸ ಮಲ್ಯರ ಹೆಸರೆಂದರೆ ಸಾರ್ವಜನಿಕೋಪಯೋಗಿ, ಪ್ರಗತಿಪರ ಕೆಲಸ ಕಾರ್ಯಗಳಿಗೆ ಪರ್ಯಾಯಪದ. ಸಾಮಾನ್ಯರಿಗೆ ಅಸಾಧ್ಯವಾಗಿದ್ದ ಅವರ ಕ್ರಿಯಾಶೀಲತೆ, ದೂರದೃಷ್ಟಿ, ಪ್ರಭಾವ ಚಾತುರ್ಯಗಳಿಂದ ಶ್ರೀನಿವಾಸ ಮಲ್ಯರು ಸಮಗ್ರ ದಕ್ಷಿಣ ಕನ್ನಡ ಜಿಲ್ಲೆಯನ್ನು ಕರ್ನಾಟಕದಲ್ಲೇ ಪ್ರಗತಿಯ ಮುಂಚೂಣಿಯಲ್ಲಿ ನಿಲ್ಲಿಸಿರುವುದು ಅವರ ಮರೆಯಲಾಗದ ಸಾಧನೆ ಎಂದೇ ಹೇಳಬಹುದು. ದಕ್ಷಿಣ ಕನ್ನಡ ಜಿಲ್ಲೆ ಇಂದು ಅಭಿವೃದ್ಧಿ, ಆಧುನಿಕತೆ, ಮೂಲಭೂತ ಸೌಕರ್ಯಗಳಿಗೆ ಸಂಬಧಿಸಿದ ದೇಶ ವಿದೇಶಗಳಲ್ಲಿ ವಶೇಷವಾದ ಸಾಧನೆ ಮತ್ತು ಸ್ಥಾನಕ್ಕೆ ಪಾತ್ರವಾಗಿದ್ದರೆ ಅದರ ಹಿಂದೆ ಈ ಅಭಿವೃದ್ಧಿಯ ಹರಿಕಾರನ ಹೆಜ್ಜೆಗುರುತುಗಳಿವೆ ಎಂದು ಶ್ರೀನಿವಾಸ ಮಲ್ಯರ ವ್ಯಕ್ತಿತ್ವವನ್ನು ಹೊಗಳಿ ಖ್ಯಾತ ಪತ್ರಕರ್ತ ಮನೋಹರ್ ಪ್ರಸಾದ್‌ರವರು ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸುತ್ತಾರೆ[೩].

ಇಂದು ಈ ದಕ್ಷಿಣ ಕನ್ನಡ ಜಿಲ್ಲೆ ಒಟ್ಟು ಅಭಿವೃದ್ಧಿಯನ್ನು ಸಾಧಿಸಿದೆ. ಜಿಲ್ಲೆ ದಿನದಿಂದ ದಿನಕ್ಕೆ ಬ್ಯಾಂಕಿಗ್, ಉನ್ನತ ಶಿಕ್ಷಣ, ವಿಮೆ, ಗುಡಿಕೈಗಾರಿಕೆ, ಪ್ರವಾಸೊದ್ಯಮ, ಇತ್ಯಾದಿಗಳಿಗೆ ಅಂದು ಶ್ರೀನಿವಾಸ ಮಲ್ಯರು ಹಾಕಿದ ಅಡಿಪಾಯವೇ ಕಾರಣ ಎಂದು ಹೇಳಬಹುದು. ಇಂದು ಜಿಲ್ಲೆ ಪ್ರತೀ ಕ್ಷೇತ್ರದಲ್ಲೂ ಹಿರಿಮೆಯನ್ನು ಮೆರೆಯುತ್ತಿದೆ, ಮಾಹಿತಿ ತಂತ್ರಜ್ಞಾನದ ಕ್ಷೇತ್ರದಲ್ಲೂ, ಸಾಫ್ಟ್ವೇರ್ ನಿರ್ಯಾತದಲ್ಲಿ ಬೆಂಗಳೂರಿನ ಬಳಿಕ ದಕ್ಷಿಣ ಕನ್ನಡ ಜಿಲ್ಲೆಯು ಮುಂಚೂಣಿಯಲ್ಲಿದೆ. ಇಷ್ಟೆಲ್ಲಾ ಯಶಸ್ಸಿಗೆ ಶ್ರೀನಿವಾಸ ಮಲ್ಯರ ದೂರದೃಷ್ಟಿಯು ಮಹತ್ವ ನಿರ್ಣಾಯಕ ಎಂದರೆ ಉತ್ಪ್ರೇಕ್ಷೆಯಾಗಲಾರದು. ದೇಶದ ಪ್ರಧಾನಿಗಳ ಸಹಿತ ಆ ಕಾಲಘಟ್ಟದಲ್ಲಿ ಎಲ್ಲಾ ನಾಯಕರು ಶ್ರೀನಿವಾಸ ಮಲ್ಯರನ್ನು 'ಮಲ್ಲಯ್ಯ' ಎಂದರೆ ದೊಡ್ಡವರು ಎಂದು ಅರ್ಥ. ಶ್ರೀನಿವಾಸ ಮಲ್ಯ ಅವರ ಮಟ್ಟಿಗೆ ಇದು ಅನ್ವರ್ಥವೇ ಆಗಿರುವುದು ವಿಶೇಷ[೩].

ಇಂದಿನ ದಿನಗಳಲ್ಲಿ ಶ್ರೀನಿವಾಸ ಮಲ್ಯರ ಹೆಸರು ಮತ್ತೆ ಮತ್ತೆ ನೆನಪಿಗೆ ಬರುವುದೆಂದರೆ, ಶಾಲೆಗೆ ಒಂದು ಕೊಠಡಿ ಕಟ್ಟಿಸಿದರೂ, ಪ್ರಾರಂಭಕ್ಕೊಂದು ಶಿಲಾಫಲಕ, ಮುಕ್ತಾಯಕ್ಕೊಂದು ಶಿಲಾಫಲಕ, ಮೆರವಣಿಗೆ ಪಟಾಕಿಗಳ ಸರಮಾಲೆಯ ಸದ್ದು ಗದ್ದಲಗಳ ಅದ್ದೂರಿಯ ಸಮಾರಂಭ "ಘರಾಕುಗಳ" ಸುರಿಮಳೆ, ಸುರಿಸುವ ಜನರ ಮಧ್ಯದಲ್ಲಿ ಜಿಲ್ಲೆಯ ಸರ್ವತೋಮುಖ ಪ್ರಗತಿಯನ್ನಷ್ಟೆ. ತನ್ನ ರಾಜಕೀಯದ ಗುರಿಯಾಗಿಸಿಕೊಂಡಿದ್ದ. ಶ್ರೀನಿವಾಸ ಮಲ್ಯರು ಅನನ್ಯ ರಾಜಕಾರಿಣಿ....... ಬಂಗಾರ ಎಂಬುದರಲ್ಲಿ ನಂಬಿಕೆ ಇರಿಸಿದ್ದ ಮಾಂತ್ರಿಕ ಎಂದು ತಿಳಿದುಬರುತ್ತದೆ. ಶ್ರೀನಿವಾಸ ಮಲ್ಯರ ಮನೆಗೆ ಯಾರಾದರೂ ಹೋದರೆ, ಅದರಲ್ಲಿ ಚರ್ಚಿಸುವ ವಿಷಯವೇ ಜಿಲ್ಲೆಯ ಅಭಿವೃದ್ಧಿಯದಾಗಿತ್ತು. ಮನೆಯಲ್ಲೆಲ್ಲಾ

ದೇಶದ, ರಾಜ್ಯದ, ದಕ್ಷಿಣ ಕನ್ನಡ ಜಿಲ್ಲೆಯ ನಕಾಶೆಗಳು ಕಾಣುತ್ತಿದ್ದು, ಯಾವಾಗ ನೋಡಿದರೂ ಶ್ರೀನಿವಾಸ ಮಲ್ಯರು ಮೇಪನ್ನು ನೋಡುತ್ತಾ ಪನ್ಸಿಲ್‌ನಲ್ಲಿ ಗುರುತು ಹಾಕುತ್ತಾ ಇರುತ್ತಿದ್ದರು. ಎಲ್ಲೆಲ್ಲಿಗೆ ಸೇತುವೆ ಆಗಬೇಕು. ಎಲ್ಲೆಲ್ಲಿಗೆ ರಸ್ತೆಗಳಾಗಬೇಕು, ಎಂಬುದರಲ್ಲೇ ಕಾರ್ಯ ಮಗ್ನರಾಗುತ್ತಿದ್ದರು ಇದೊಂದು ಅವರ ಹವ್ಯಾಸವೇ ಆಗಿತ್ತು ಎಂದು ಶ್ರೀನಿವಾಸ ಮಲ್ಯರ ಕುಟುಂಬದ ಸದಸ್ಯರಾದ ಹಾಗೂ ಶ್ರೀನಿವಾಸ ಮಲ್ಯರು ದತ್ತು ಮಗನೆಂದೇ ಬೆಳೆಸಿದ, ಅವರ ಕೊನೆಯವರೆಗೂ, ಜೊತೆಯಲ್ಲೇ ಇರುತ್ತಿದ್ದ ಜನಾರ್ಧನ ಪ್ರಭುಗಳು ಅಂದಿನ ದಿನದ ನೆನಪುಗಳನ್ನು ನಮ್ಮಲ್ಲಿ ಮೆಲುಕುಹಾಕಿದರು[೪].

ಸ್ವಂತಕ್ಕೊಂದು ಮನೆಯನ್ನೂ ಮಾಡದೆ ಬಾಡಿಗೆ ಮನೆಯಲ್ಲಿದ್ದುಕೊಂಡು ಕೆಲವೊಮ್ಮೆ ಸಂಬಂಧಿಕರ ಮನೆಯಲ್ಲೂ ಉಳಿದುಕೊಂಡು ಆಸ್ತಿ ಪಾಸ್ತಿ ಏನೂ ಮಾಡದೆ ಒಬ್ಬ ಆದರ್ಶವ್ಯಕ್ತಿಯಾಗಿ ಬಾಳಿ ಬದುಕಿದವರು. ಈಗಿನ ತಲೆಮಾರಿನವರಿಗೆ ಶ್ರೀನಿವಾಸ ಮಲ್ಯರು ಮಾದರಿಯಾಗಿದ್ದಾರೆ. ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ಅಪ್ರತಿಮ ಪ್ರಗತಿ ಸಾಧಿಸಿದ ಪ್ರತಿಭಾಶಾಲಿಗಳು ಜನಿಸಿದ್ದು ತಾವು ಆರಿಸಿಕೊಂಡ ಕ್ಷೇತ್ರಗಳಲ್ಲಿ ಅವರು ಮುನ್ನಡೆದು, ಜಿಲ್ಲೆಯಿಂದ ಹೊರಗೂ ತಮ್ಮ ಸಾಧನೆಗಾಗಿ ಮನ್ನಣೆ ಪಡೆದಿದ್ದಾರೆ.

ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಯಲ್ಲಿ ಸಫಲತೆಯನ್ನು ಪಡೆದಿರುವುದು ಕಂಡುಬರುತ್ತದೆ. ಉದಾಹರಿಸುವುದಾದರೆ "ಮಣಿಪಾಲದ ಶಿಲ್ಪಿ" ಎಂದು ಪ್ರಖ್ಯಾತರಾಗಿರುವ ಡಾ. ಟಿ. ಎಂ. ಎ .ಪೈಗಳು. ಹಲವರು ಇವರನ್ನು ಗುರುತಿಸುವಂತಹ ಅನೇಕ ಸಾಧನೆಗಳನ್ನು ಇವರು ಶೈಕ್ಷಣಿಕ, ಬ್ಯಾಂಕಿಂಗ್, ವಿಮಾಕ್ಷೇತ್ರಗಳಲ್ಲಿ ಮಾಡಿದ್ದಾರೆ. ಜನಪ್ರಿಯತೆಯನ್ನೂ ಗಳಿಸಿದ್ದಾರೆ. ಆದರೆ ಶ್ರೀನಿವಾಸ ಮಲ್ಯರಂತಹ, ಮಹಾನ್ ಚೇತನವನ್ನು ಜಿಲ್ಲೆಯ ಅಭಿವೃದ್ಧಿಗಾಗಿ ತನ್ನ ಜೀವಿತಕಾಲದಲ್ಲಿ ಅನೇಕ ಕೆಲಸ ಕಾರ್ಯಗಳನ್ನು ಮಾಡಿದ್ದರೂ ಪ್ರಸ್ತುತ ಪೀಳಿಗೆಯವರು ಶ್ರೀನಿವಾಸ ಮಲ್ಯರನ್ನು ಅಷ್ಟಾಗಿ ಗುರುತಿಸಿಕೊಂಡಿಲ್ಲ.

### ೫.೨. ತೋನ್ಸೆ ಮಾಧವ ಅನಂತ ಪೈ ಹಾಗೂ ಮಣಿಪಾಲ

ಅವಿಭಾಜ್ಯ ದಕ್ಷಿಣ ಜಿಲ್ಲೆಯ ಪೂರ್ವಭಾಗದಲ್ಲಿ ಅಭಿವೃದ್ಧಿಯ ರುವಾರಿಯಾಗಿ 'ಮಣಿಪಾಲದ ಶಿಲ್ಪಿ' ಯೆಂದೇ ಪ್ರಖ್ಯಾತರಾದ ತೋನ್ಸೆ ಅನಂತ ಮಾಧವ ಪೈ ಒಂದೆಡೆಯಾದರೆ, ದಕ್ಷಿಣ ಭಾಗದಲ್ಲಿ "ಅಭಿವೃದ್ಧಿಯ ಹರಿಕಾರ"ನೆಂದು ಹೆಸರಾದ ಶ್ರೀನಿವಾಸ ಮಲ್ಯರು. ಶ್ರೀನಿವಾಸ ಮಲ್ಯರಿಗಿಂತಲೂ ಮೊದಲೇ ಟಿ.ಎಂ.ಎ.ಪೈಗಳ ಜನನವಾದರೂ, ಆನಂತರದ ದಿನಗಳಲ್ಲಿ ಮಾಧವ ಪೈಗಳ ಸಾಧನೆ, ಶ್ರೀನಿವಾಸ ಮಲ್ಯರಿಗೂ ಪ್ರೇರಣ ಶಕ್ತಿಯಾಗಿತ್ತು. ಶ್ರೀನಿವಾಸ ಮಲ್ಯರ ಜನನ ೧೯೦೨ ರಲ್ಲಿ ಹಾಗೂ ಅವರ ಮರಣ ೧೯೬೫ರಲ್ಲಿ ಆದರೆ ಮಾಧವ ಪೈಗಳ ಮರಣ ೧೯೭೫ ರಲ್ಲಿ ಆಗಿದೆ. ಇಬ್ಬರ ವ್ಯಕ್ತಿತ್ವದಲ್ಲೂ ಅಭಿವೃದ್ಧಿಯ ಕನಸುಗಳಿರುವುದು ಕಾಣುತ್ತದೆ. ಅವರಿಬ್ಬರೂ ಮಹಾನ್ ಸಾಧಕರು. ಆರ್ಥಿಕ, ಶೈಕ್ಷಣಿಕ, ಆರೋಗ್ಯ ಹಾಗೂ ಉದ್ಯಮ ಕ್ಷೇತ್ರಗಳಲ್ಲಿ, ಮಾಧವ ಪೈಗಳು ಬಹಳಷ್ಟು ಸಾಧನೆಯನ್ನು ಮಾಡಿ ಬದುಕಿರುವಾಗಲೇ

ದಂತಕತೆಯಾದರೆ, ರಾಜಕೀಯ ಮುತ್ಸದ್ದಿಯಾಗಿ ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಸರ್ವತೋಮುಖ ಬೆಳವಣಿಗೆಗೆ ಮಾಧವ ಪೈಗಳಷ್ಟೆ ಕೊಡುಗೆಗಳನ್ನು ನೀಡಿದ ಶ್ರೀನಿವಾಸ ಮಲ್ಯರನ್ನು, ಅಭಿವೃದ್ಧಿ ಅಧ್ಯಯನದ ದೃಷ್ಟಿಯಿಂದ ನಿರ್ಲಕ್ಷಿಸಲಾಗದು. ಆದುದರಿಂದ ಇಬ್ಬರು ಮಹಾನ್ ವ್ಯಕ್ತಿಗಳ ವ್ಯಕ್ತಿವಿಶೇಷತೆಯ ತುಲನಾತ್ಮಕ ನೋಟವೊಂದು ಪ್ರಸ್ತುತ ಅಧ್ಯಯನಕ್ಕೆ ಹೊಸ ಒಳನೋಟಗಳನ್ನು ಒದಗಿಸಬಲ್ಲುದು.

### ೫.೩. ತೋನ್ಸೆ ಮಾಧವ ಪೈಗಳ ಕೌಟುಂಬಿಕ ಹಿನ್ನೆಲೆ

ಇವರ ಜನನ ಸ್ಥಳ ಮೂಲತಃ ಇಂದು ಉಡುಪಿ ಜಿಲ್ಲೆಗೆ ಸೇರಿರುವ ಕಲ್ಯಾಣಪುರ. ತಂದೆ ತೋನ್ಸೆ ಅನಂತ ಪೈ ಹಾಗೂ ತಾಯಿ ಯಶೋದ. ೧೯೨೧ ರಲ್ಲಿ ಶಾರದ ಎಂಬವರೊಡನೆ ಅವರ ವಿವಾಹವಾಗುತ್ತದೆ. ತೋನ್ಸೆ ಮಾಧವ ಪೈಗಳು ಒಂಭತ್ತು ವರುಷದವರಿರುವಾಗ ತಂದೆ ನಿಧನರಾದರಲ್ಲದೆ ಸಂಪೂರ್ಣವಾಗಿ ತಾಯಿಯ ಆಸರೆಯಲ್ಲಿ ಬೆಳೆದವರು. ತಾಯಿ ಯಶೋದ ಅನಕ್ಷರಸ್ಥೆ ಎನ್ನುವುದನ್ನು ನಾವಿಲ್ಲಿ ಗಮನಿಸಬೇಕು. ಆದರೆ ಅವರಲ್ಲಿ ಮಕ್ಕಳಿಗೆ ಶಿಕ್ಷಣವನ್ನು ಕೊಡುವಂತಹ ದೂರದರ್ಶಿತ್ವವಿತ್ತು. ಜೀವನಮೌಲ್ಯಗಳನ್ನು, ಶಿಸ್ತು ನಡತೆಗಳನ್ನು ಮಕ್ಕಳಲ್ಲಿ ರೂಪಿಸಬೇಕು ಹಾಗೂ ಮುಂದೆ ಮಕ್ಕಳು ಸಮಾಜದ ಏಳಿಗೆಗೆ ಮುಂದಾಗಬೇಕು ಎನ್ನುವ ಪಾರಂಪರಿಕ ಚಿಂತನೆಗಳು ಅವರ ತಾಯಿಯಲ್ಲಿತ್ತು. ಇದನ್ನು ಗಮನಿಸುವಾಗ ಶ್ರೀನಿವಾಸ ಮಲ್ಯರಿಗೆ ಅವರ ತಂದೆ ತಾಯಿಯರು ಹಾಗೂ ಕುಟುಂಬದ ಹಿರಿಯರು ವ್ಯಕ್ತಿತ್ವ ವಿಕಸನಕ್ಕೆ ಒದಗಿಸಿದ ಕೌಟುಂಬಿಕ ಮೌಲ್ಯಗಳು ಹಾಗೂ ತರಬೇತಿಯಂತೆಯೇ ಮಾಧವ ಪೈಯವರ ಕುಟುಂಬದ ಮೌಲ್ಯಗಳು ಹಾಗೂ ಬೆಂಬಲಗಳು ಅವರ ತಾಯಿಯಿಂದ ಲಭಿಸಿದೆ.

### ೫.೪. ತೋನ್ಸೆ ಮಾಧವ ಅನಂತ ಪೈಯವರ ಶಿಕ್ಷಣ

ಪತಿಯ ಮರಣಾನಂತರ ಕಲ್ಯಾಣಪುರದಲ್ಲಿ ನೆಲೆಸಿದ ಯಶೋದಾರವರು ಮಾಧವ ಪೈಗಳಿಗೆ ಪ್ರಾಥಮಿಕ ಶಿಕ್ಷಣವನ್ನು ಕೊಡಿಸಿದ್ದು ಕಲ್ಯಾಣಪುರದ "ಕಾಥೊಲಿಕ್ ಕ್ರಿಶ್ಚಿಯನ್" ಶಾಲೆಯಲ್ಲಿ ನಂತರದ ಶಿಕ್ಷಣವನ್ನು ಹಿಂದೂ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಪಡೆದಿರುವುದು ಕಂಡು ಬರುತ್ತದೆ. ಮುಂದೆ ಸಹೋದರ ಪುರುಷೋತ್ತಮ ಪೈ, ಉಡುಪಿಯಲ್ಲಿ ನೆಲೆಸಿದಾಗ, ೧೯೧೦-೧೪ ಮಾಧವ ಪೈಯವರು ತಾಲೂಕು ಬೋರ್ಡ್ ಶಾಲೆಯಲ್ಲಿ ಶಿಕ್ಷಣವನ್ನು ಪಡೆದರು. ಪ್ರೌಢಶಿಕ್ಷಣವನ್ನು ಪಡೆಯುವ ಉದ್ದೇಶದಿಂದ ಉಡುಪಿಯ ಕ್ರಿಶ್ಚಿಯನ್ ಹೈಸ್ಕೂಲ್ ಸೇರಿರುವರು ಎನ್ನುವುದು ಗಮನಾರ್ಹ. ಅವರ ಆಶ್ರಯದಾತರಾಗಿ ವಕೀಲಿ ವೃತ್ತಿ ಮಾಡುತ್ತಿದ್ದ ದೊಡ್ಡಪ್ಪ ಮುಕುಂದ ಪೈಗಳು ಆಶ್ರಯ ನೀಡಿರುವುದು ಕಾಣುತ್ತದೆ.

ಹಿಂದಿನ ದಶಕಗಳಿಂದಲೇ ಶೈಕ್ಷಣಿಕ ಕೊಡುಗೆಗಳಿಗೆ ಹೆಸರಾಗಿದ್ದ ಸಂತ ಅಲೋಶಿಯಸ್ ಕಾಲೇಜಿನಲ್ಲಿ ಮಾಧವ ಪೈಯವರ ಉನ್ನತ ವಿದ್ಯಾಭ್ಯಾಸವು ನಡೆದಿದೆ. ಗಣಿತ ಮತ್ತು ವಿಜ್ಞಾನಗಳ ಅಧ್ಯಯನದಲ್ಲಿ ಮೊದಲಿಗರಾಗಿದ್ದ ಮಾಧವ

ಪೈಯವರಿಗೆ ೮೦ ರೂಪಾಯಿಗಳ ವಿದ್ಯಾರ್ಥಿವೇತನವು ದೊರಿಯುತ್ತಿತ್ತು. ಶಿಕ್ಷಣವನ್ನು ಪಡೆಯುವ ಸಂದರ್ಭದಲ್ಲಿ ಕ್ರಿಶ್ಚಿಯನ್ ಶಿಕ್ಷಣ ಸಂಸ್ಥೆಗಳ ಶಿಸ್ತುಬದ್ಧ ನಡವಳಿಕೆ, ಹಾಗೂ ಕ್ರಿಶ್ಚಿಯನ್ ಪಾದ್ರಿಗಳ ಸೇವಾಮನೋಭಾವವು ಮಾಧವ ಪೈಯವರಿಗೆ ಬಹಳಷ್ಟು ಪ್ರಭಾವವನ್ನು ಬೀರಿತ್ತು. ಇಲ್ಲಿ ನಾವು ಗಮನಿಸಬಹುದಾದ ಬಹುಮುಖ ಅಂಶವೆಂದರೆ ಶ್ರೀನಿವಾಸ ಮಲ್ಯರು ವಿದ್ಯಾರ್ಥಿದೆಸೆಯಿಂದಲೇ ಸ್ವಾತಂತ್ರ್ಯ ಚಳುವಳಿಗಳು, ಹಾಗೂ ಮಹಾತ್ಮಾ ಗಾಂಧಿಯವರ ವ್ಯಕ್ತಿತ್ವದಿಂದ ಪ್ರಭಾವಗೊಂಡವರಾಗಿದ್ದರು ಎಂದು ಹಿಂದಿನ ಅಧ್ಯಾಯದಲ್ಲಿ ಸಾಬೀತುಪಡಿಸಲಾಗಿದೆ. ಆದರೆ ಮಾಧವ ಪೈಯವರಿಗೆ ಕ್ರೈಸ್ತ ಸಂಸ್ಥೆಗಳ ಶಿಸ್ತು ಮತ್ತು ಸೇವೆಯ ಪರಂಪರೆಯು ಆಕರ್ಷಣೆಯಾಗಿತ್ತು ಎನ್ನುವುದೇ ವ್ಯಕ್ತಿ ವಿಶೇಷತೆ.

ಮಾಧವ ಪೈಯವರ ಸೇವೆಯನ್ನು ಮೊದಲ ಹಂತದಿಂದ ಗುರುತಿಸುವುದಾದರೆ ಈ ಕೆಳಗಿನ ನಿದರ್ಶನವನ್ನು ಕೊಡಬಹುದು. ಕಲ್ಯಾಣಪುರದ ಪ್ರಾಥಮಿಕ ಶಾಲೆಯು ಹಣದ ತೊಡಕುಗಳಿಂದಾಗಿ ಮುಚ್ಚುವಂತಹ ಪರಿಸ್ಥಿತಿಯು ಒದಗಿದಾಗ ಮಾಧವ ಪೈಯವರು ಆದರ್ಶ ಹೊಂದಿದ್ದ ಆ ಶಾಲೆಯನ್ನು ಮುಚ್ಚಬಾರದೆಂದು ಪಣತೊಟ್ಟು ತಮ್ಮ ಪದವಿ, ಡಿಗ್ರಿ ಹಾಗೂ ಒಂದು ವರ್ಷದ ಶಿಕ್ಷಣವನ್ನು ಎರವಾಗಿಟ್ಟಿದ್ದರು ಎನ್ನುವುದು ಉಲ್ಲೇಖಿಸಲ್ಪಟ್ಟಿದೆ[illegible].

ಶಿಕ್ಷಣ ಸಂಸ್ಥೆಗೆ ಮಾಧವ ಪೈಗಳ ಮೊದಲ ಸೇವೆಯು ಈ ಕೆಳಗಿನಂತೆ ಸಂದಿರುತ್ತದೆ.

- ಸಂಬಳವಿಲ್ಲದೆ ಮುಖ್ಯೋಪಾಧ್ಯಾಯರಾಗಿ ಸೇವೆ
- ರಜೆ ದಿನಗಳಲ್ಲಿ ಊರೆಲ್ಲಾ ಸುತ್ತಾಡಿ ಪಿಠೋಪಕರಣ ಹಾಗೂ ಹಣದ ಸಂಗ್ರಹಣೆ
- ಹಣ ಸಂಗ್ರಹಣೆಗಾಗಿ ಬೊಂಬಾಯಿಯವರೆಗೂ ಪ್ರಯಾಣ
- ಗಣಿತ ಪಠ್ಯ ಪುಸ್ತಕಗಳು ಯೋಗ್ಯವಾಗಿಲ್ಲವೆನ್ನುವುದನ್ನು ಅರಿತು, ಸ್ವತಃ ಗಣಿತ ಪಠ್ಯದ ತಯಾರಿ.

ಈ ಮೇಲಿನ ಸೇವೆಗಳನ್ನು ಗಮನಿಸಿದರೆ ಕಲ್ಯಾಣಪುರದ ಶಾಲೆಯನ್ನು ಉಳಿಸಲು ಹಾಗೂ ಬೆಳೆಸಲು ಮಾಧವ ಪೈಗಳು ತೋರಿದ ಪರಿಶ್ರಮವೊಂದು ಮನವರಿಕೆಯಾಗುತ್ತದೆ.

### ೫.೫. ತೋನ್ಸೆ ಮಾಧವ ಅನಂತ ಪೈಯವರ ವೈದ್ಯಕೀಯ ಶಿಕ್ಷಣ

ಜೂನ್ ೧೯೨೦ ರಂದು ಮಾಧವ ಪೈಯವರಿಗೆ ಮದ್ರಾಸು ವಿಶ್ವವಿದ್ಯಾಲಯದಲ್ಲಿ ವೈದ್ಯಕೀಯ ಶಿಕ್ಷಣಕ್ಕಾಗಿ ಸೀಟು ಲಭಿಸಿತ್ತು. ವೈದ್ಯರಾಗಬೇಕೆನ್ನುವುದು ಅವರ ಬಾಲ್ಯದ ಕನಸುಗಳಾಗಿತ್ತು. ಆ ಕನಸುಗಳಿಗೆ ಎರಡು ನಿದರ್ಶನಗಳಿವೆ. ಒಮ್ಮೆ ತಮ್ಮ ಹಲ್ಲನ್ನು ಕೀಳಿಸಲು ಹೋದಾಗ ಅಪಾರ ನೋವುಂಟಾಗಿದ್ದ ಕಾರಣ ಅದನ್ನು ನಿವಾರಿಸಲು ಹೊಸದೊಂದು ಔಷಧವನ್ನು ಕಂಡುಹಿಡಿಯಬೇಕೆಂಬ ಹಂಬಲ, ಜೊತೆಗೆ ವಿದ್ಯಾರ್ಥಿಯಾಗಿದ್ದಾಗ ಶುಶ್ರೂಶೆಯನ್ನು ಪಡೆಯಲು ಸರ್ಕಾರಿ ಆಸ್ಪತ್ರೆಗೆ ಹೋದಾಗ ಅಲ್ಲಿ ತೋರಿಸಲ್ಪಟ್ಟ ಅನಾದರಣೆ. ಈ ಮೇಲಿನ ಎರಡು ಕಾರಣಗಳಿಂದಾಗಿ ವೈದ್ಯಕೀಯ ಕ್ಷೇತ್ರವನ್ನು ಉತ್ತಮ ಪಡಿಸಬೇಕೆಂಬ ದೂರದರ್ಶಿತ್ವವೊಂದು ಅವರ ಮನಸ್ಸಿನಲ್ಲಿ ಮೂಡಿರುವುದು ಕಾಣಿಸುತ್ತದೆ. ಈ ಹಿನ್ನಲೆಯಿಂದ ಶ್ರೀನಿವಾಸ ಮಲ್ಯರನ್ನು ಗಮನಿಸಿದರೆ ಯುವಕನಾಗಿದ್ದಾಗ ಮೂಡಿಸಿಕೊಂಡ

ದೂರದರ್ಶಿತ್ವವು ಕೇವಲ ಒಂದು ಕ್ಷೇತ್ರಕ್ಕೆ ಸೀಮಿತಗೊಂಡಿರಲಿಲ್ಲವೆನ್ನುವುದು ಅಧ್ಯಯನದಲ್ಲಿ ಸಾಬೀತಾಗಿದೆ. ಅವರ ಚಿಂತನೆಗಳು, ಅಭಿವೃದ್ಧಿ ಪರಿಕಲ್ಪನೆ ಹಾಗೂ ನಾಯಕತ್ವವು ವಿಶಾಲ ದೃಷ್ಟಿಕೋನವನ್ನು ಹೊಂದಿದ್ದವು ಎನ್ನುವುದು ಪರಿಶೋಧನೆಯಲ್ಲಿ ಕಂಡಿರುವ ವಾಸ್ತವಾಂಶವಾಗಿದೆ.



೧೯೨೦–೨೫ ರ ವೇಳೆಗೆ ಮಾಧವ ಪೈಗಳು ಏಕಾಗ್ರತೆ ಹಾಗೂ ಶ್ರದ್ಧೆಯಿಂದ ಎಂ. ಬಿ. ಬಿ. ಯಸ್ ಪದವಿಯನ್ನು ಪಡೆದರು. ಶ್ರೀನಿವಾಸ ಮಲ್ಯರು ರಾಜಕಾರಣಿಯಾದರೆ, ಮಾಧವ ಪೈಗಳು ವೈದ್ಯರಾದರು. ಹೀಗೆ ಅವರಿಬ್ಬರ ವೃತ್ತಿ ಕ್ಷೇತ್ರಗಳು ವಿಭಿನ್ನವಾದರೂ, ಸಾರ್ವಜನಿಕ ಒಳಿತಿಗಾಗಿ ಸೇವೆಯನ್ನು ಮಾಡಬೇಕೆಂಬ ಹಂಬಲವು ಒಂದೇ ಆಗಿದೆ. ಆರಂಭದ ಹಂತದಲ್ಲಿ ಮಾಧವ ಪೈಗಳಿಗೆ ವೈದ್ಯಕೀಯ ವೃತ್ತಿಯನ್ನು ವಿದೇಶದಲ್ಲಿ ಆರಂಭಿಸಬೇಕೆಂಬ ಆಸೆಯಿತ್ತು. ಅಲ್ಲದೆ ಹಾಂಗ್‌ಕಾಂಗ್‌ನಲ್ಲಿ ವೈದ್ಯಕೀಯ ವೃತ್ತಿಯನ್ನು ಆರಂಭಿಸಬೇಕೆಂಬ ಆಸೆಯೂ ಕಾಣುತ್ತದೆ. ಇದಕ್ಕಾಗಿ ವಿಶೇಷವಾಗಿ ಜರ್ಮನಿಯಿಂದ ವೈದ್ಯಕೀಯ ಉಪಕರಣಗಳನ್ನು ತರಿಸಿಕೊಂಡಿರುವುದು ಕಾಣುತ್ತದೆ. ಆದರೆ ತಾಯಿಯವರಿಗೆ ವಿದೇಶಕ್ಕೆ ಹೋಗುವ ಮಾಧವ ಪೈಗಳ ನಿರ್ಣಯವು ಸರಿಹೊಂದದ ಕಾರಣ ಸ್ವದೇಶದಲ್ಲಿಯೇ ಮಾಧವ ಪೈಗಳು ನೆಲೆಸುವಂತಾಗಿದೆ. ಇಲ್ಲಿಯೂ ಶ್ರೀನಿವಾಸ ಮಲ್ಯರ ವ್ಯಕ್ತಿತ್ವಕ್ಕೂ, ಮಾಧವ ಪೈಗಳ ವ್ಯಕ್ತಿತ್ವಕ್ಕೂ ಮೂಲಭೂತ ವ್ಯತ್ಯಾಸವಿದೆ ಎಂಬುದನ್ನು ಗಮನಿಸಬೇಕಾಗುತ್ತದೆ. ಶ್ರೀನಿವಾಸ ಮಲ್ಯರಿಗೆ ಅಪಾರವಾದ ದೇಶಭಕ್ತಿ, ರಾಷ್ಟ್ರಪ್ರೇಮ, ಸ್ವಜನಹಿತೋದ್ಧಾರಗಳ ಪರಿಕಲ್ಪನೆ ಇದ್ದರೆ, ಮಾಧವ ಪೈಗಳಿಗೆ ವಿದೇಶದಲ್ಲಿ ನೆಲೆಸಿ ವೈದ್ಯಕೀಯ ರಂಗದಲ್ಲಿ ಸಾಧಿಸಬೇಕೆಂಬ ಪರಿಕಲ್ಪನೆ ಇತ್ತು. ಇಲ್ಲಿ ಮಾಧವ ಪೈಗಳು ಸ್ವದೇಶದಲ್ಲಿ ಉಳಿಯಲು ತಾಯಿಯ ಮಾತುಗಳು ಒಂದು ಅಸ್ತ್ರದಂತೆ ಕೆಲಸ ಮಾಡಿದೆ. “ನೀನು ನಮ್ಮೊಂದಿಗೆ ಇರಬೇಕು, ಮೊದಲು ನಮ್ಮ ದೇಶಕ್ಕೂ ನಮ್ಮ ಜನರಿಗೂ ಸೇವೆಮಾಡು........ ನಾನು ಬದುಕಿ, ನೀನು ದೊಡ್ಡ ವ್ಯಕ್ತಿಯಾಗುವುದನ್ನು ನನ್ನ ಕಣ್ಣಿಂದಲೇ ನೋಡಬೇಕು” ಎನ್ನುವ ಮಾತುಗಳು ಮಾಧವ ಪೈಯವರನ್ನು ಈ ದೇಶದಲ್ಲಿ ಉಳಿಸಿಕೊಳ್ಳಲು ಸಾಧ್ಯವಾಗಿದೆ[೬]. ಶ್ರೀನಿವಾಸ ಮಲ್ಯರಿಗೆ ವಿದೇಶದ ಆಕರ್ಷಣೆ ಎಂಬುದೇ ಇರಲಿಲ್ಲ. ಅವರು ವೃತ್ತಿಪರ ಶಿಕ್ಷಣವನ್ನು ಪಡೆಯದೇ ಸಾಮಾನ್ಯ ಶಿಕ್ಷಣವನ್ನು ಪಡೆದು ರಾಜಕೀಯ ರಂಗವನ್ನು ಪ್ರವೇಶಿಸಿ ಜನಮಾನ್ಯತೆಯನ್ನು ಪಡೆದವರು.

## ೫.೬. ತೋನ್ಸೆ ಮಾಧವ ಅನಂತ ಪೈಯವರ ವೃತ್ತಿ ಸಾಧನೆಗಳು

ಮಾಧವ ಪೈಗಳ ವೈದ್ಯಕೀಯ ವೃತ್ತಿ ಆರಂಭಗೊಂಡಿರುವುದು ಉಡುಪಿಯಲ್ಲಿ. ಯಶಸ್ವಿ ನರ್ಸಿಂಗ್ ಹೋಂ ತೆರೆಯುವುದರೊಂದಿಗೆ ಆರಂಭಗೊಂಡಿದೆ. ಚಿಕಿತ್ಸೆಗಾಗಿ ಬರುವ ರೋಗಿಗಳಲ್ಲಿ ಬಡತನ, ಹಣದ ಅಭಾವ, ಕೆಟ್ಟ ಆರ್ಥಿಕ ಪರಿಸ್ಥಿತಿಗಳನ್ನು ಮಾಧವ ಪೈಗಳು ಕಾಣುತ್ತಿದ್ದರು. ಮಾನವೀಯತೆ ಹಾಗೂ ಆರ್ಥಿಕವಾಗಿ ಹಿಂದುಳಿದ ಜನರ ಬಗ್ಗೆ ಕಳಕಳಿಯನ್ನು ತೋರುವ ಮನೋಭಾವವಿದ್ದುದು ಮಾಧವ ಪೈಗಳ ವ್ಯಕ್ತಿತ್ವದಲ್ಲಿ ಕಾಣಸಿಗುತ್ತದೆ. ಜನರ ದುರ್ಬಲ ಆರ್ಥಿಕ ಪರಿಸ್ಥಿತಿಗಳನ್ನು ಸುಧಾರಿಸಲು ತಾವೇನಾದರೂ ಮಾಡಬೇಕೆಂಬ ಹಂಬಲವೊಂದು ಹುಟ್ಟಿಕೊಂಡಿರುವುದು ಕಾಣುತ್ತದೆ. ಇದನ್ನು ಗಮನಿಸುವಾಗ ಶ್ರೀನಿವಾಸ ಮಲ್ಯರಿಗೂ ಮಾಧವ ಪೈಗಳಿಗೂ ಚಿಂತನೆಯಲ್ಲಿ ಸಾಮ್ಯಾತೆ ಇರುವುದು ತೋರುತ್ತದೆ. ವೈದ್ಯರಾಗಿದ್ದ ಅವರು ಪಟ್ಟಣ ಹಾಗೂ ಹಳ್ಳಿಗಳಿಂದ ಬರುವ ರೋಗಿಗಳಿಗೆ ಉಚಿತ ವೈದ್ಯಕೀಯ ಸೌಕರ್ಯಗಳನ್ನು ನೀಡುತ್ತಿದ್ದರು. ವೈದ್ಯರಾಗಿದ್ದಾಗ ಪಡೆದ ವಾಸ್ತವಿಕ ಅನುಭವಗಳು ಅವರನ್ನು ವಿಶಿಷ್ಟ ಚಿಂತನೆಗಳಿಗೆ ಒರೆ ಹಚ್ಚಿರುವುದು ಕಾಣುತ್ತದೆ. ಈ ಚಿಂತನೆಗಳೇ ಮುಂದಿನ ಕಾರ್ಯತತ್ಪರತೆ ಹಾಗೂ ಕ್ರಿಯಾಶೀಲತೆಗೆ ನಾಂದಿಯಾಗಿದೆ.

## ೫.೬. ಮಾಧವ ಪೈ ಹಾಗೂ ಬ್ಯಾಂಕಿಗ್ ಉದ್ಯಮ

ದುರ್ಬಲ ಜನರಿಗೆ ಹಣದ ನಿರ್ವಹಣೆಯ ತಿಳುವಳಿಕೆ ಇಲ್ಲದಿರುವುದನ್ನು ಮಾಧವ ಪೈಗಳು ಮೊದಲು ಮನಗಾಣುತ್ತಾರೆ. ದುಡಿದ ಸಂಪಾದನೆಯಲ್ಲಿ ಒಂದಂಶವನ್ನಾದರೂ ಮುಂದಿನ ಭವಿಷ್ಯಕ್ಕಾಗಿ ಉಳಿತಾಯ ಮಾಡಬೇಕೆನ್ನುವ ಯೋಚನೆಯೊಂದು ಅವರಿಗೆ ಹೊಳೆದಿದೆ. ಈ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಿ ಮೊದಲು ಸ್ಥಾಪಿಸಿದ್ದು "ಕೆನರಾ ಇಂಡಸ್ಟ್ರಿಯಲ್ ಮತ್ತು ಬ್ಯಾಂಕಿಂಗ್ ಸಿಂಡಿಕೇಟ್" (೧೯೨೫). ಇದಕ್ಕೆ ಜೊತೆಗೂಡಿದವರು ಅಣ್ಣ ಉಪೇಂದ್ರ ಪೈ. ಈ ಸಂಸ್ಥೆಯಲ್ಲಿ ಮಾಧವ ಪೈಯವರು ಅಧ್ಯಕ್ಷರಾಗಿ (೧೯೨೫–೧೯೬೭) ಆಡಳಿತ ನಿರ್ದೇಶಕರಾಗಿ (೧೯೨೫–೧೯೬೧) ಸುಧೀರ್ಘಕಾಲ ಕಾರ್ಯ ನಿರ್ವಹಿಸಿರುವುದು ಸಂಶೋಧಿಸುವಾಗ ಕಂಡು ಬಂದಿದೆ.

ವೈದ್ಯಕೀಯ ವೃತ್ತಿಯ ನಡುವೆಯೂ ಬಿಡುವನ್ನು ಮಾಡಿಕೊಂಡು ಮಾಧವ ಪೈಯವರು ಬ್ಯಾಂಕಿನ ಹೊಸ ಕೆಲಸಗಾರರಿಗೆ ವ್ಯವಸ್ಥೆಗಳ ಕುರಿತಾದ ಮಾಹಿತಿಗಳನ್ನು ನೀಡುತ್ತಿದ್ದರು. ಬ್ಯಾಂಕಿನ ವ್ಯವಹಾರಗಳು ಹಾಗೂ ಇತರ ಜವಾಬ್ದಾರಿಗಳನ್ನು ನಿಭಾಯಿಸಬೇಕಾಗಿದ್ದ ಮಾಧವ ಪೈಗಳಿಗೆ ವೈದ್ಯಕೀಯ ವೃತ್ತಿಯನ್ನು ಬಿಡಬೇಕಾದ ಅನಿವಾರ್ಯತೆಯು ಬಂದೊದಗಿತು ಎನ್ನುವುದನ್ನು ದಾಖಲೆಗಳು ಸೂಚಿಸಿವೆ[೬].

ಮಾಧವ ಪೈಗಳ ಬಹುದೊಡ್ಡ ಧ್ಯೇಯವೇ ಉಳಿತಾಯವಾಗಿತ್ತು. ಭವಿಷ್ಯದಲ್ಲಿ ಹಣ ಉಳಿಸುವುದೊಂದೇ, ಆರ್ಥಿಕವಾಗಿ ಬೆಳೆಯಲು ಅನುಕೂಲಕಾರಿ ಎನ್ನುವ ಅಭಿಪ್ರಾಯವನ್ನು ಮಾಧವ ಪೈಗಳು ಹೊಂದಿದ್ದರು. ಅದಕ್ಕಾಗಿಯೇ ಅವರು ಆರಂಭಿಸಿದ್ದು "ಪಿಗ್ಮಿ ಯೋಜನೆ". ಯಾವನೇ ಆಗಲಿ ಬ್ಯಾಂಕಿನಲ್ಲಿ ಒಂದು ಖಾತೆಯನ್ನು ತೆಗೆಯಲು

ಸಾಧ್ಯವೆನ್ನುವುದನ್ನು ಮಾಧವ ಪೈಗಳು ಜನರಿಗೆ ತೋರಿಸಿಕೊಟ್ಟವರು. ಅವರ ವ್ಯಕ್ತಿ ವಿಶೇಷತೆ ಎಂದರೆ ಠೇವಣಿದಾರನು ಬ್ಯಾಂಕಿಗೆ ಬರಬೇಕಾಗಿಲ್ಲ ಬ್ಯಾಂಕೇ ಠೇವಣಿದಾರನ ಮನೆಬಾಗಿಲಿಗೆ ಹೋಗಬೇಕೆನ್ನುವುದೇ ಮಾಧವ ಪೈಯವರ ಯೋಜನೆಯ ಮುಖ್ಯ ಉದ್ದೇಶವಾಗಿದ್ದುದು ಕಾಣುತ್ತದೆ. ಇದರಿಂದಾಗಿ ವಾಣಿಜ್ಯ ಸಂಸ್ಥೆಗಳು ಭದ್ರ ನೆಲೆಯೂರಲು ಸಾಧ್ಯವಾಯಿತು ಎನ್ನುವುದನ್ನು ಈ ಅಧ್ಯಯನದಲ್ಲಿ ಸಾಬೀತುಪಡಿಸಲು ಸಾಧ್ಯ. ಮಾಧವ ಪೈಗಳು ಆರಂಭಿಸಿರುವ ಬ್ಯಾಂಕ್ ಪದ್ಧತಿಯು ಹಳ್ಳಿಯ ಪರಿಸ್ಥಿತಿಗೆ ಒಗ್ಗಿಕೊಳ್ಳುವಂತಹ ವ್ಯವಸ್ಥೆಯಾಗಿತ್ತು. ಗ್ರಾಮೀಣ ಬ್ಯಾಂಕ್ ಎಂಬುವುದು, ಬ್ಯಾಂಕಿಗೆ ಗ್ರಂಥಗಳ ಯಾವ ಪುಟದಲ್ಲೂ ಇಲ್ಲದಿದ್ದಾಗ ದಕ್ಷಿಣ ಕನ್ನಡ ಜಿಲ್ಲೆಯ ಹಳ್ಳಿಗಳಲ್ಲಿ ಸಿಂಡಿಕೇಟಿನ ಗ್ರಾಮೀಣ ಶಾಖೆಗಳನ್ನು ಮಾಧವ ಪೈಗಳು ತೆರೆದದ್ದು ಅತ್ಯಂತ ಮಹತ್ವದ ಸಾಧನೆಯ ಮೈಲಿಗಲ್ಲು. ಶ್ರೀನಿವಾಸ ಮಲ್ಯರಿಗೆ ಹೋಲಿಸಿ ನೋಡಿದಾಗ ಮಾಧವ ಪೈಗಳು ಬ್ಯಾಂಕ್ ಉದ್ಯಮವೊಂದನ್ನು ಹೊಸದಾಗಿ ಹುಟ್ಟುಹಾಕಿ ಪೋಷಿಸಿ, ಅಗಮ್ಯವಾಗಿ ಬೆಳೆಸಿರುವುದು ಪರಿಶೋಧನೆಗಳಿಂದ ತಿಳಿದುಕೊಳ್ಳಬಹುದಾದ ವಾಸ್ತವ ಸಂಗತಿಗಳಾಗಿವೆ. ಆದರೆ ಶ್ರೀನಿವಾಸ ಮಲ್ಯರು ಆಗಲೇ ಸ್ಥಾಪಿಸಿಟ್ಟಿದ್ದ ಕೆನರಾ ಬ್ಯಾಂಕಿನ ನಿರ್ದೇಶಕರಾಗಿ ಸೇವೆ ಸಲ್ಲಿಸಿರುವುದು ಗಮನಾರ್ಹ. ಮುಂದೆ ಮಾಧವ ಪೈಗಳ ಬ್ಯಾಂಕಿಂಗ್ ಕ್ಷೇತ್ರದ ಸಾಧನೆಗಳನ್ನು ವಿಶ್ಲೇಷಿಸುತ್ತಾ ಹೋದಂತೆ ಹಲವಾರು ಆಯಾಮಗಳು ಗೋಚರಿಸತೊಡಗುತ್ತವೆ.

- ಗ್ರಾಮೀಣ ಬ್ಯಾಂಕ್‌ಗಳ ವಿಸ್ತರಣೆ
- ''ಯುನಿಟ್ ಟ್ರಸ್ಟ್''ಗೆ ರಿಸರ್ವ್‌ಬ್ಯಾಂಕಿನ ಆಶೀರ್ವಾದ ದೊರಕುವುದಕ್ಕೆ ನಾಲ್ಕು ವರ್ಷಕ್ಕೆ ಮೊದಲೇ ತಮ್ಮ ಬ್ಯಾಂಕಿನಲ್ಲಿಯೇ ''ಇನ್ವೆಸ್ಟರ್ಸ್ ಏಜನ್ಸಿ''ಯ ಸ್ಥಾಪನೆ.
- ಸಿಂಡಿಕೇಟಿಗೆ ಅನುಷಂಗಿಕವಾಗಿ ಕೇರಳ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಅಪೆಕ್ಸ್ ಬ್ಯಾಂಕುಗಳ ಸ್ಥಾಪನೆ, ಮತ್ತು ಆ ಮೂಲಕ ಪ್ರಾದೇಶಿಕ ಅಭಿವೃದ್ಧಿಯ ಹಂಚಿಕೆ.
- ಕಾಲೇಜು ಕಟ್ಟುವ ಮಹದಾಸೆಯಿಂದ ಮಹಾಜನತೆಯಿಂದಲೇ ನೂರು ರೂಪಾಯಿ ದೇಣಿಗೆ ಪಡೆದುಕೊಂಡು ಹೆತ್ತವರ ದಾನಕ್ಕೆ ಕೈಯೊಡ್ಡುವಿಕೆ ಇತ್ಯಾದಿಗಳು.

ಇವುಗಳೆಲ್ಲವನ್ನೂ ಗಮನಿಸುವಾಗ, ಸಮಗ್ರ ಬ್ಯಾಂಕಿಂಗ್ ಕ್ಷೇತ್ರಕ್ಕೆ ಹಾಗೂ ಆ ಮೂಲಕ ಅಭಿವೃದ್ಧಿಗೆ ಮಾಧವ ಪೈಗಳು ಹಾಕಿದ ಬುನಾದಿಗಳು ಬ್ಯಾಂಕಿಂಗ್ ಅಧ್ಯಯನದ ತಜ್ಞರಿಗೆ ಸವಾಲುಗಳೆಂದೇ ಪರಿಗಣಿಸಬೇಕು.

ಸಾರ್ವಜನಿಕ ಸಂಸ್ಥೆಗಳನ್ನು ಕಟ್ಟುವುದು, ಯೋಜನೆಗಳನ್ನು ರೂಪಿಸುವುದು ಮತ್ತು ದೈನಂದಿನ ಚಟುವಟಿಕೆಗಳಲ್ಲಿ ಜವಾಬ್ದಾರಿಯುತವಾಗಿ ಭಾಗವಹಿಸುವುದು ಕೆಲವೇ ವ್ಯಕ್ತಿಗಳಿಗೆ ಮಾತ್ರ ಸಾಧ್ಯವಾಗುತ್ತದೆ. ಇದನ್ನು ಸಾಕ್ಷೀಕರಿಸುವುದು ಮಾಧವ ಪೈಗಳ ಸಾಧನಾ ಮನೋಭಾವ ಹಾಗೂ ಪರಿಶ್ರಮದ ವ್ಯಕ್ತಿತ್ವ. ತಾನು ಮಾಡಬೇಕಾದ ಕೆಲಸಕ್ಕೆ ಹಾಗೂ ಗುರಿಯನ್ನು ತಲುಪುವುದಕ್ಕೆ ಸ್ವಾಭಿಮಾನವನ್ನು ಒತ್ತಿ ಹಿಡಿದು ಇತರರ ಮನವೊಲಿಸುವ ಕಲೆಯು ಮಾಧವ ಪೈಗಳಿಗಿತ್ತು. ಸಿಂಡಿಕೇಟ್ ಬ್ಯಾಂಕ್‌ಗೆ ಶೇರುದಾರರನ್ನು ಸಂಗ್ರಹಿಸುವ ಕಾಲದಲ್ಲಿ ವೈಯಕ್ತಿಕವಾಗಿ ಉತ್ತರಕನ್ನಡ ಜಿಲ್ಲೆಯ

ಶ್ರೀಮಂತರ ಮನೆಗೆ ಮಾಧವ ಪೈಗಳು ಭೇಟಿ ನೀಡುತ್ತಿದ್ದರು. ಅನೇಕ ಬಾರಿ ನಿರಾಕರಣೆಯಾದರೂ ಛಲವನ್ನು ಮಾತ್ರ ಅವರು ಬಿಟ್ಟಿರಲಿಲ್ಲ. ಆ ನಿಷ್ಠಾವಂತ ಸೇವೆಯಿಂದಾಗಿಯೇ ಇಂದು ಸಿಂಡಿಕೇಟ್ ಬ್ಯಾಂಕ್ ದೇಶಾದ್ಯಂತ ಮಾನ್ಯತೆ ಪಡೆದ ಬ್ಯಾಂಕುಗಳಲ್ಲಿ ಒಂದಾಗಿದೆ ಎನ್ನುವುದನ್ನು ಈ ಸಂಶೋಧನೆಯಲ್ಲಿ ಗಮನಿಸಿಕೊಳ್ಳಲಾಗಿದೆ[೮].

ಇದನ್ನೇ ಸಮರ್ಥಿಸಿಕೊಂಡು ಸಿಂಡಿಕೇಟ್ ಬ್ಯಾಂಕ್ ದೇಶದ ಬಹುದೊಡ್ಡ ಬ್ಯಾಂಕ್ ಆಗಿ ಬೆಳೆಯಲು ಮುಖ್ಯ ಕಾರ್ಯಕರ್ತರು ಡಾ.ಟಿ.ಎಂ.ಎ.ಪೈ. ಅದೇ ಅವರ ಉಳಿತಾಯ ಯೋಜನೆ. ಇದರಿಂದಾಗಿ ಸಣ್ಣ ವ್ಯಾಪಾರಸ್ಥರು, ಕೃಷಿಕರು, ಕುಶಲಕರ್ಮಿಗಳು,....... ಹೀಗೆ ಸಮಾಜದ ಎಲ್ಲಾ ವರ್ಗದ ಜನರು ಬ್ಯಾಂಕಿನ ಸಾಲದ ಸದುಪಯೋಗವನ್ನು ಪಡೆಯುವಂತಾಗಿದೆ. ಸಾಲದ ಮರುಪಾವತಿಯಲ್ಲಿ ಹಾಗೂ ಪಿಗ್ಮಿ ಯೋಜನೆಯ ಮೂಲಕ ಜನರಿಗೆ ಉಳಿತಾಯದ ಮಹತ್ವವನ್ನು ತಿಳಿಸಿದ ಮಹಾನ್ ವ್ಯಕ್ತಿ ಡಾ. ಟಿ. ಎಂ .ಎ. ಪೈಯವರು. ಚಿನ್ನ ಅಡಮಾನದ ಸಾಲ, ಸಿಂಡಿಕೇಟ್ ಬ್ಯಾಂಕ್‌ನ ಇನ್ನೊಂದು ಮಹತ್ವದ ಕೊಡುಗೆ. ಡಾ. ಟಿ. ಎಂ. ಎ. ಪೈ ಯವರ ದೂರದರ್ಶಿತ್ವದಿಂದ ಇಂದು ಬ್ಯಾಂಕಿಂಗ್ ವ್ಯವಹಾರ ಎಲ್ಲಾ ಸಾಮಾನ್ಯ ಜನರ ನಿಲುಕಿಗೆ ಸಿಗುವಂತಹ ವ್ಯವಸ್ಥೆಯಾಗಿ ರೂಪುಗೊಂಡಿದೆ ಎಂದು ಜನಪ್ರಿಯ ಕನ್ನಡ ದೈನಿಕ ಉದಯವಾಣಿ ಪತ್ರಿಕೆಯು ಶ್ಲಾಘಿಸಿದೆ[೯]. ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಉದ್ಯಮದಲ್ಲಿ ಮಾಧವ ಪೈಯವರು ಸ್ವತಂತ್ರ ವ್ಯಕ್ತಿಯಾಗಿ ಭಾಗಿಯಾಗಿರುವುದನ್ನು ಕಂಡುಕೊಳ್ಳಬಹುದು.

**೩.೮. ಶಿಕ್ಷಣ ಸಂಸ್ಥೆಗಳು ಹಾಗೂ ಆರೋಗ್ಯ ಕ್ಷೇತ್ರಕ್ಕೆ ಮಾಧವ ಪೈಯವರ ಕೊಡುಗೆಗಳು**

ಪ್ರಸ್ತುತ ಕಾಲಘಟ್ಟದಲ್ಲಿ ''ಮಣಿಪಾಲ ಎಂದರೆ ಟಿ. ಎಂ. ಎ. ಪೈ...... ಟಿ. ಎಂ. ಎ. ಪೈ ಎಂದರೆ ಮಣಿಪಾಲ''ವೆಂಬ ಉದ್ಘೋಷವೊಂದು ಸಾಮಾನ್ಯ. ಆದರೆ ಇದರ ಹಿಂದೆ ಮಾಧವ ಪೈಯವರು ಮಾಡಿದ್ದ ಪರಿಶ್ರಮ, ಸೋಲನ್ನೇ ಗೆಲುವನ್ನಾಗಿ ಮಾರ್ಪಡಿಸುವಂತಹ ಧೀ ಶಕ್ತಿಯ ಅಭಿವ್ಯಕ್ತಿ, ಪ್ರಯೋಗಶೀಲ ಕಾರ್ಯ ಚಟುವಟಿಕೆ ಇತ್ಯಾದಿಗಳನ್ನು ಗುರುತಿಸಬೇಕಾಗುತ್ತದೆ. ಕಲ್ಲು ಮುಳ್ಳು, ಗಿಡ, ಕಾಡು ಪ್ರಾಣಿಗಳಿಂದ ತುಂಬಿದ್ದ ಒರಟಿನ ಭೂಮಿಯೊಂದು ಮಾಧವ ಪೈಗಳ ಸಾಹಸದ ಸಾಧನೆಯ ಪಥಕ್ಕೆ ತೆರೆದುಕೊಂಡು ಅತ್ಯಾಧುನಿಕತೆಯ ''ಕಾಸ್ಮೋಪೊಲಿಟನ್'' ನಗರಿಯಾಗಿ ದೇಶವಿದೇಶದ ಜನರ ಮನಸೆಳೆಯುತ್ತದೆ. ಜ್ಞಾನ ಹಾಗೂ ಆರೋಗ್ಯಕ್ಕಾಗಿ ಮಾಧವ ಪೈಗಳು ಮಣಿಪಾಲವನ್ನು ಪರಿವರ್ತಿಸುವುದರಲ್ಲಿ ಅದ್ಭುತವಾದ ಕ್ರಿಯಾಶೀಲತೆಯನ್ನು ಹೊಂದಿದ್ದರು ಎನ್ನುವುದಕ್ಕೆ ಮಣಿಪಾಲದ ವೈದ್ಯಕೀಯ ಕಾಲೇಜು, ಅದಕ್ಕೆ ಸಂಬಂಧಿಸಿದ ವಿಶೇಷ ವಿಭಾಗಗಳು, ದಂತವೈದ್ಯ ಕಾಲೇಜು, ಇಂಜಿನಿಯರಿಂಗ್ ವಿಭಾಗಗಳು, ತಾಂತ್ರಿಕ ಸಂಸ್ಥೆಗಳು, ಕಂಪ್ಯೂಟರ್ ಕೇಂದ್ರಗಳು, ಮುಂತಾದುವುಗಳೇ ಸಾಕ್ಷಿಯಾಗಿದೆ. ಇದನ್ನು ಶಿಕ್ಷಣ ಮತ್ತು ವೈದ್ಯಕೀಯದ ''ಕ್ರಾಂತಿ'' ಎಂದರೂ ತಪ್ಪಾಗಲಾರದು.

ಮುಂದೆ ಒಂದೊಂದೇ ಕ್ಷೇತ್ರವನ್ನು ಬಿಡಿಬಿಡಿಯಾಗಿ ನೋಡಲಾರಂಭಿಸಿದಾಗ ಪ್ರತೀ ಕ್ಷೇತ್ರದಲ್ಲೂ ಮಾಧವ ಪೈಗಳು ತೋರಿದ ನಾಯಕತ್ವ, ಹಾಗೂ ಆಸಕ್ತಿಗಳು ಗಮನವನ್ನು ಸೆಳೆಯುತ್ತದೆ. ಅಲ್ಲದೆ, ಓದುಗರಲ್ಲಿ ಕುತೂಹಲವನ್ನು

ಮೂಡಿಸುವಂತಹ ಚೈತನ್ಯವೊಂದು ದೊರಕುತ್ತದೆ. ಸಿಂಡಿಕೇಟ್ ಬ್ಯಾಂಕಿಗೆ, ಅಸ್ತಿ ಭಾರ ಹಾಕಿದಂತೆಯೇ, ಮಣಿಪಾಲದಂತಹ ಕುಗ್ರಾಮದಲ್ಲಿ ಇಡೀ ದೇಶದಲ್ಲಿ ಮೊದಲಬಾರಿಗೆ ವೈದ್ಯಕೀಯ ಕಾಲೇಜೊಂದು ಸ್ಥಾಪಿಸಲ್ಪಟ್ಟಿರುವುದು ಮಾಧವ ಪೈಯವರ ಅದ್ವಿತೀಯ ಸಾಧನೆಗಳಲ್ಲಿ ಒಂದು ಎನ್ನುವುದನ್ನು ನಿಸ್ಸಂಕೋಚವಾಗಿ ಪ್ರಸ್ತುತ ಅಧ್ಯಯನವು ಸಾಬೀತು ಪಡಿಸುತ್ತದೆ.

"ಮಣಿಪಾಲವು "ನವನಿರ್ಮಿತ ವಿದ್ಯಾನಗರಿ" ಎಂದು ಅಂದಿನ ಪತ್ರಿಕೆಯಾಗಿದ್ದ ನವಯುಗವು ತನ್ನ ದೀಪಾವಳಿ ವಿಶೇಷ ಸಂಚಿಕೆಯಲ್ಲಿ ಮಾಧವ ಪೈಯವರ ಸಾಧನೆಯನ್ನು ಸವಿಸ್ತಾರವಾಗಿ ಉಲ್ಲೇಖಿಸಿದೆ. ಕಾರ್ಕಳ ರಾಜಮಾರ್ಗದಲ್ಲಿ ಉಡುಪಿಯಿಂದ ಬರಿಯ ಮೂರೇ ಮೈಲು ದೂರದಲ್ಲಿ ಬೆಟ್ಟದ ಮೇಲೆ ಕಟ್ಟಿದ ಒಂದು ಪುಟ್ಟ ಊರು. ಸುಮಾರು ಹದಿನೈದು ವರ್ಷಗಳಿಗೆ ಮೊದಲು ಪರಿಮಿತ ಜನಸಂಖ್ಯೆ ಸೌಕರ್ಯಗಳಿಂದ ಕೂಡಿದ ಹಳ್ಳಿಯಾಗಿದ್ದ ಮಣಿಪಾಲ ಇಂದು ಬೆಳೆದು ಬರುತ್ತಿರುವ ನವಭಾರತದ ಒಂದು ವಿದ್ಯಾನಗರವೆನಿಸುತ್ತದೆ, ಮರುಭೂಮಿಗಳು ವಜ್ರದ ಗನಿಗಳಿಂದಾಗಿ ಹೆಸರು ಪಡೆದಿದ್ದರೆ, ಗುಡ್ಡಬೆಟ್ಟಗಳು ಲೋಹಗಳಿಂದಾಗಿ ಬೆಳಕಿಗೆ ಬಂದಿದ್ದರೆ, ಪ್ರಾಕೃತಿಕ ಸಂಪತ್ತಿನಿಂದಾಗಿ ಹಲವಾರು ಹಿಂದುಳಿದ ಪ್ರದೇಶಗಳು ಮುಂದೆ ಬಂದಿದೆ. ಮಣಿಪಾಲದಲ್ಲಿ ವಜ್ರದ ಗಣಿಗಳಿಲ್ಲ, ಲೋಹವೂ ದೊರೆಯುತ್ತಿಲ್ಲ. ಆದರೆ ಇವೆಲ್ಲವುಗಳಿಗಿಂತಲೂ ನೂರು ಪಾಲು ಉತ್ತಮವೆನಿಸಿದ ಸರಸ್ವತಿಯ ಕ್ರೀಡಾರಂಗವಿದೆ; ಇದರಿಂದಲೇ ಮಣಿಪಾಲದ ಹೆಸರಿಂದು ವಿಶ್ವವ್ಯಾಪಿಯಾಗಿದೆ. ಮಣಿಪಾಲವನ್ನು ಸರಸ್ವತಿಯ ಭವ್ಯ ಮಂದಿರವಾಗಿ ಕಟ್ಟಿದ ಅಮರ ಕೀರ್ತಿ ಎಕೆಡೆಮಿ ಆಫ್ ಜನರಲ್ ಎಜ್ಯುಕೇಶನ್ ಎಂಬ ಸಂಸ್ಥೆಯದು, ಮತ್ತದರ ರಿಜಿಸ್ಟ್ರಾರ್ ಡಾ. ಟಿ. ಮಾಧವ ಅನಂತ ಪೈಯವರದು".




ವೃತ್ತಿಯಲ್ಲಿ ಡಾಕ್ಟರರಾಗಿದ್ದ ಮಾಧವ ಪೈಗಳು ತಮ್ಮ ಬೆಂಬಲಿಗರ ಸಹಕಾರದಿಂದ ಹಲವಾರು ವಾಣಿಜ್ಯ ಸಂಸ್ಥೆಗಳ ಜನ್ಮಕ್ಕೆ ಕಾರಣಪುರುಷರಾದರು. ಅವುಗಳ ಉನ್ನತಿಗಾಗಿ ದುಡಿದರು. ಇಡೀ ಭಾರತದಲ್ಲಿ ಬ್ಯಾಂಕಿಂಗ್ ವ್ಯವಹಾರದಲ್ಲಿ ಸುಪ್ರಸಿದ್ಧವಾದ ಸಿಂಡಿಕೇಟ್ ಬ್ಯಾಂಕ್. ಡಾ. ಮಾಧವ ಪೈಯವರ ದುಡಿಮೆಯ ಮೂರ್ತರೂಪವೆಂದರೂ ತಪ್ಪಲ್ಲ. ಅದಕ್ಕೊಂದು ಆಕಾರವನ್ನು ನೀಡಬೇಕಾದರೆ ಅವರು ಪಟ್ಟ ಬವಣೆ ಎಷ್ಟೆಂದೂ ಹೇಳುವಂತಿಲ್ಲ. ವಾಣಿಜ್ಯ ರಂಗದೊಡನೆ ಡಾ.ಪೈಯವರ ದೂರದೃಷ್ಟಿ ಶಿಕ್ಷಣ ರಂಗದತ್ತ ಸರಿಯಿತು. ಎರಡು ದಶಕಗಳಿಗೂ ಮೊದಲೇ "ಎಕೆಡೆಮಿ ಆಫ್ ಜನರಲ್ ಎಜ್ಯುಕೇಶನ್" ಸಂಸ್ಥೆಯು ಸ್ಥಾಪನೆಯಾಗಿತ್ತು. ಅಂದು ಸಂಸ್ಥೆ ಮತ್ತು ಅದರ ಸಂಸ್ಥಾಪಕರು ಯಾವ

ಯಾವ ಕನಸುಗಳನ್ನು ಕಾಣುತ್ತಿದ್ದರೋ ಕಲ್ಪನೆಗೂ ನಿಲುಕದಂತಹ ಮಹಾ ಸಾಹಸವನ್ನು ಪ್ರದರ್ಶಿಸಿ ಯಶಸ್ಸು ಗಳಿಸುತ್ತಿದೆ. ಏನಿದ್ದುದು ಏನಾಯಿತು ಎಂದು ಎಲ್ಲರಿಗೂ ಮೂಗಿಗೆ ಬೆರಳೇರಿಸುವಂತಾಗಿದೆ.

"೧೯೪೯ ನೆಯ ಇಸವಿ ಏಕೆಡೆಮಿ ಇತಿಹಾಸದಲ್ಲಿ ಮಹತ್ವದ ವರ್ಷ. ಅದುವರೆಗೆ ಒಂದೆರಡು ಪ್ರಾಥಮಿಕ ಶಾಲೆ, ಮತ್ತೊಂದು ಪ್ರೌಢಶಾಲೆಯನ್ನು ನಡೆಸುತ್ತಿದ್ದ ಅಕಾಡೆಮಿಯು ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜನ್ನು ಸ್ಥಾಪಿಸಿತು. ಮುಂದೆ ವೃತ್ತಿಪರ ಕಾಲೇಜುಗಳನ್ನು ತೆರೆಯುವ ಮಹಾತ್ವಾಕಾಂಕ್ಷೆ ಡಾ.ಪೈಯವರಲ್ಲಿ ಹುಟ್ಟಿತ್ತು. ಸರ್ಕಾರವು ತೆರೆಯಲು ಹಿಂಜರಿಯುತ್ತಿದ್ದ ಮೆಡಿಕಲ್ ಕಾಲೇಜೊಂದನ್ನು ಅಕಾಡೆಮಿ ತೆರೆಯಲು ನಿರ್ಧರಿಸುವಾಗ ಅದನ್ನು ಹುಚ್ಚಾಟವೆಂದೇ ಕರೆದವರೇ ಹೆಚ್ಚು. ಆದರೆ ಒಳ್ಳೆಯ ಕಾರ್ಯಗಳು ಒಳ್ಳೆಯ ರೀತಿಯಲ್ಲಿಯೇ ನೆರವೇರುತ್ತವೆ. ವಿದ್ಯಾರ್ಥಿಗಳ ಪಾಲಕರಿಂದ ಸಹಾಯಧನ ತೆಗೆದುಕೊಂಡೇ ಕಾಲೇಜು ಕಟ್ಟುವ ಹೊಸ ಯೋಜನೆಯನ್ನು ಡಾ. ಪೈ ರೂಪಿಸಿದರು. ಇದು ಕ್ರಾಂತಿಕಾರಕವೆನಿಸಿತು".




"ಇಂದು ಮಣಿಪಾಲದಲ್ಲಿ ಮೆಡಿಕಲ್ ಕಾಲೇಜು, ಇಂಜಿನಿಯರಿಂಗ್, ಡೆಂಟಲ್, ಫಾರ್ಮಸ್ಯುಟಿಕಲ್ ಕಾಲೇಜುಗಳಿವೆ. ಮಣಿಪಾಲ್ ಕಾಲೇಜ್ ಆಫ್ ಎಜ್ಯುಕೇಶನ್ ಮತ್ತು ಉಡುಪಿ ಲಾ ಕಾಲೇಜುಗಳು ಉಡುಪಿಯಲ್ಲಿದೆ. ಇವುಗಳಲ್ಲದೆ ಕುಂದಾಪುರ, ಕಾರ್ಕಳ, ಮೂಡಬಿದಿರೆ, ಮೂಲ್ಕಿ ಮತ್ತು ಶೃಂಗೇರಿಗಳಲ್ಲಿ ಕಾಲೇಜನ್ನು ನಡೆಸುತ್ತಿದೆ. ಹೀಗೆ ಅವರವರ ಮನೆಯ ಬಳಿಯಲ್ಲಿಯೇ ಉಚ್ಚ ವಿದ್ಯಾಭ್ಯಾಸವನ್ನು ಕೊಡುವ ವ್ಯವಸ್ಥೆಯನ್ನು ಅಕಾಡೆಮಿ ಮಾಡಿದೆ".

"ಇಂದು ಅಕಾಡೆಮಿ ಹಲವು ಪ್ರೌಢ ಶಾಲೆಗಳನ್ನು ನಡೆಸುತ್ತಿದೆ. ಮಣಿಪಾಲ, ಮಂಗಳೂರು, ಕಡಿಯಾಳಿ, ಅಲೆವೂರು, ಪರ್ಕಳ, ಆಗುಂಬೆಗಳಲ್ಲಿ ಅಕಾಡೆಮಿಯ ಹೈಸ್ಕೂಲ್‌ಗಳಿವೆ. ವೆಟರ್ನರಿ, ಅಗ್ರಿಕಲ್ಚರಲ್, ಶಾರೀರಿಕ ಶಿಕ್ಷಣ

ಕಾಲೇಜುಗಳನ್ನು ತೆರೆಯುವ ಆಲೋಚನೆ ಅಕಾಡೆಮಿಯದು. ಅಂತೆಯೇ ಎಂ.ಜಿ.ಎಂ ಕಾಲೇಜಿನಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ತೆರೆಯುವ ಆಶಯವಿದೆ".

"ಏಕಾಡೆಮಿಯ ಶೈಕ್ಷಣಿಕ ಸೇವೆಯು ಬಹು ಮುಖ್ಯವಾದದ್ದು. ಒಂದು ಸ್ವತಂತ್ರ ವಿಶ್ವವಿದ್ಯಾನಿಲಯದ ಸ್ಥಾಪನೆಗೆ ಅನಿವಾರ್ಯವಾದದ್ದು. ಡಾ. ಮಾಧವ ಪೈಗಳು ವಿಶ್ವವಿದ್ಯಾನಿಲಯದ ಕನಸನ್ನು ಕಾಣುತ್ತಿದ್ದಾರೆ. ಹೊಸ ವಿಶ್ವವಿದ್ಯಾನಿಲಯವನ್ನು ತೆರೆಯಲು ಸದ್ಯ ಸರಕಾರ ಅನುಮತಿ ಕೊಡುವುದಿಲ್ಲವೆಂದು ಶಿಕ್ಷಣ ಮಂತ್ರಿಗಳು ಹೇಳಿದ್ದರೂ, ಅನುಮತಿಯನ್ನು ಕೊಡುವ ಕಾಲದಲ್ಲಿ ಡಾ. ಮಾಧವ ಪೈಯವರ ಕೇಳಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸುವರೆಂದು ಭಾವಿಸಬಹುದು".

"ಮೆಡಿಕಲ್ ಕಾಲೇಜಿನ ಸ್ಥಾಪನೆಯ ವೇಳೆ ಅಡ್ಡಬಂದಿದ್ದ ಒಂದು ಪ್ರಶ್ನೆ ಆಸ್ಪತ್ರೆಯದು. ಕಾಲೇಜು ಸ್ಥಾಪನೆಯಾದರೆ, ಆಸ್ಪತ್ರೆ ತಾನಾಗಿಯೇ ನಿರ್ಮಾಣವಾಗುವುದೆಂಬ ಡಾ.ಪೈಯವರ ವಾದವನ್ನು ಅಂದು ಅಧಿಕಾರಿಗಳು ಅರ್ಥಮಾಡಿಕೊಂಡಿರಲಿಲ್ಲ. ಇಂದು ಮಣಿಪಾಲದ, ಕಸ್ತೂರ್ಬಾ ಜನರಲ್ ಆಸ್ಪತ್ರೆಯ ಹೆಸರು ಜಗತ್ಪ್ರಸಿದ್ಧವಾಗಿದೆ. ಎಲ್ಲಾ ಸೌಲಭ್ಯಗಳು ದೊರೆಯುತ್ತಿದೆ. ದೂರದ ನಗರ ಪ್ರದೇಶಗಳಿಂದಲೂ ಜನರು ಬರುವುದೇ ಇದಕ್ಕೆ ಸಾಕ್ಷಿಯಾಗಿದೆ."

"ಆಸ್ಪತ್ರೆಯ ಸೇವೆಗಾಗಿ ಮಾಧವ ಪೈಯವರು ನರ್ಸಿಂಗ್‌ನ ಕನಸನ್ನು ಕಂಡಿದ್ದಾರೆ. ನರ್ಸಿಂಗ್ ತರಬೇತಿಯ ಸೌಕರ್ಯವನ್ನು ಇಲ್ಲಿ ಒದಗಿಸಲು ವಿಶ್ವವಿದ್ಯಾನಿಲಯದಿಂದ ಅನುಮತಿಯನ್ನು ಪಡೆಯಬೇಕಾಯಿತು. ಹೀಗೆ ಒಂದರ ಹಿಂದೆ ಒಂದು ಕೇಳಿದ್ದರೂ, ಅನುಮತಿಯನ್ನು ಕೇಳಿ ಸವಾಲೆಂಬಂತೆ ಇಂದು ಮಣಿಪಾಲದಲ್ಲಿ ಹಲವಾರು ಕಟ್ಟಡಗಳು ತಲೆ ಎತ್ತಿ ನಿಂತಿದೆ. ವಿದ್ಯಾರ್ಥಿಗಳು ಸಾವಿರಾರು ಸಂಖ್ಯೆಯಲ್ಲಿ ವಿದ್ಯಾಧ್ಯಯನದಲ್ಲಿ ತೊಡಗಿಸಿಕೊಂಡು ಜೀವನೋಪಾಯಕ್ಕಾಗಿ ಹೊಸ ಆಯಾಮಗಳನ್ನು ಕಂಡುಕೊಳ್ಳುತ್ತಿದ್ದಾರೆ[೧೦]".



ಮಾಧವ ಪೈಯವರ ವಿವಿಧ ಸಾಧನಾ ಕ್ಷೇತ್ರಗಳನ್ನು ಗುರುತಿಸಿ "ನವನಿರ್ಮಿತ ವಿದ್ಯಾನಗರಿ–ಮಣಿಪಾಲ" ವೆಂದು ಬಣ್ಣಿಸಿದ ನವಯುಗ ಪತ್ರಿಕೆಯನ್ನು ಅಭಿನಂದಿಸಬೇಕಾಗುತ್ತದೆ. ಮಾಧವ ಪೈಯವರ ಸಮಗ್ರ ಸಾಧನೆಯನ್ನು

ಹಂತಹಂತವಾಗಿ ಗುರುತಿಸಿ ಪ್ರಕಟಣೆಯನ್ನು ನೀಡಿ ಜನಸಾಮಾನ್ಯರಿಗೆ ತಲುಪಿಸಿರುವುದು ದಾಖಲಾಗಿದೆ. ಇಂತಹ ಪತ್ರಿಕಾ ಹೇಳಿಕೆಗಳು ವ್ಯಕ್ತಿ ವಿಶೇಷತೆಯನ್ನು ಆಯಾಯ ಕಾಲಘಟ್ಟಕ್ಕೆ ತಕ್ಕಂತೆ ಚಿತ್ರೀಕರಿಸುತ್ತದೆ. ಇಂತಹ ಅಪರೂಪದ ದಾಖಲೆಗಳನ್ನು ಉಡುಪಿಯ ಗೋವಿಂದ ಪೈ ಸಂಶೋಧನಾ ಸಂಸ್ಥೆಯು ರಕ್ಷಿಸುತ್ತಿರುವುದು ಇಂದಿನ ಪೀಳಿಗೆಗೆ ಬಹುದೊಡ್ಡ ಕೊಡುಗೆಯೆಂದು ಹೇಳಿದರೆ ತಪ್ಪಾಗಲಾರದು.

**೫.೯. ಸಾಧನೆಯ ಹಾದಿಯಲ್ಲಿ ಮಾಧವ ಪೈಯವರು ಎದುರಿಸಿದ ಸವಾಲುಗಳು**

ಮಣಿಪಾಲದಂತಹ ನಿರ್ಜನ ಪ್ರದೇಶವೊಂದನ್ನು ಸಾಲ ಮಾಡಿ ಎಂಟುಹತ್ತು ಭೂಮಿಯನ್ನು ಖರೀದಿಸಿ ಅಲ್ಲಿಯೇ ವಾಸ್ತವ್ಯ ಹೂಡುವ ಯೋಜನೆಯನ್ನು ಮಾಧವ ಪೈಗಳು ಹಾಕಿಕೊಂಡಿದ್ದರು. ಅಂತೆಯೇ ಮನೆಯೊಂದನ್ನು, ನಿರ್ಮಿಸಿ ವಾಸ್ತವ್ಯವನ್ನು ಹೂಡಿ ಗದ್ದೆಯ ಕೃಷಿಕಾರ್ಯ, ಮಿಶ್ರಕೃಷಿ, ನೈಗೆ ಉದ್ಯಮ, ಹೆಂಚಿನ ಕಾರ್ಖಾನೆ, ಹಾಗೂ ಸೆನೆಟೋರಿಯಂ ಮುಂತಾದುವುಗಳನ್ನು ಅಸ್ತಿತ್ವಕ್ಕೆ ತಂದರು. ಆದರೆ ಈ ಸಾಹಸವನ್ನು ಜನಸಾಮಾನ್ಯರು ಪ್ರಶಂಶಿಸಿದಂತಿಲ್ಲ. ಇದನ್ನು ಹುಚ್ಚುತನವೆಂದು ಕರೆಯಲಾಯಿತು. ಕೆಲವರು ಅಣಕಿದ ಮಾತುಗಳನ್ನು ಹೇಳಿರುವುದು ಕಾಣುತ್ತದೆ. ಲಾಭ ಎಲ್ಲಿದೆ ಈತ ಎಲ್ಲಿಗೂ ಹೋಗುವವನಲ್ಲ..... ಮಣಿಪಾಲದ ಕಲ್ಲು ನೆಲದಲ್ಲಿ ಚಿನ್ನದ ಗಣಿ ಇರಬಹುದೇನೋ ಎಂದು ಅಣಕಿಸುತ್ತಿದ್ದರು. ಅಂತೆಯೇ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವಾಗ ಪೈಯವರಿಗೆ ಹುಚ್ಚು ಎನ್ನುವ ಮಾತುಗಳೇ ಕೇಳಿ ಬರುತ್ತಿದ್ದವು. ದನಗಳಿಗೆ ಪ್ರವೇಶ ಕೊಡುವ ಶಾಲೆಯೆಂದು ಕಲ್ಯಾಣಪುರದ ಪ್ರಾಥಮಿಕ ಶಾಲೆಯನ್ನು ಟೀಕಿಸುತ್ತಿದ್ದರು. ಉಡುಪಿಗೆ ಪ್ರಥಮ ಕಲಾಕಾಲೇಜು ಬೇಕೆಂದು ಕೇಳಿಕೊಂಡಾಗ "ಒಳ್ಳೆಯ ಪ್ರಾಥಮಿಕ ಶಾಲೆ ತೆರೆಯಿರಿ, ಕಾಲೇಜು ನಿಮಗೆ ನುಂಗಲಾರದ ತುತ್ತು ಎಂದು ಉಪದೇಶಿಸಿದರು". ಅಂತೆಯೇ ವೈದ್ಯಕೀಯ ಕಾಲೇಜನ್ನು ಸ್ಥಾಪಿಸುವಾಗ ಪ್ರಸಿದ್ಧ ವೈದ್ಯರು, ಮದರಾಸು ವಿಶ್ವವಿದ್ಯಾನಿಲಯದ ಅಂದಿನ ಕುಲಪತಿಯಾದ ಲಕ್ಷ್ಮಣಸ್ವಾಮಿ ಮೊದಲಿಯಾರ್‌ರವರು ಮತ್ತು ಉಡುಪಿಯ ಜನರು "ಹುಚ್ಚು ಎಂದು ತೀರ್ಪು ನೀಡಿದ್ದರು."

ಸಿಂಡಿಕೇಟ್ ಬ್ಯಾಂಕನ್ನು ಕೇವಲ ೮೦೦೦ ರೂ. ಗಳ ಬಂಡವಾಳದಿಂದ ತೊಡಗಿಸಿಕೊಂಡಾಗಲೂ ಮಾಧವ ಪೈಗಳಿಗೆ ಸಿಕ್ಕಿದ್ದು ನಕಾರಾತ್ಮಕ ಮಾತುಗಳೇ ಆಗಿವೆ. ಅಡ್ಯನಡ್ಕ ಕೃಷ್ಣ ಭಟ್ಟರ ಅನಂತ ಪೈ ಯವರ 'ಅಭಿನಂದನಾ ಗ್ರಂಥದಲ್ಲಿ' ಜನರು ಅವಹೇಳನ ಮಾಡುತ್ತಿದ್ದ ರೀತಿಯನ್ನು ಈ ಕೆಳಗಿನಂತೆ ಬಣ್ಣಿಸುತ್ತಾರೆ "ಸಿಂಡಿಕೇಟ್ ಬ್ಯಾಂಕ್‌ನಲ್ಲಿ ದುಡ್ಡು ಇಡುವುದು ಒಂದೇ, ಅರಬ್ಬಿ ಸಮುದ್ರಕ್ಕೆ ಅದನ್ನು ಎಸೆಯುವುದೂ ಒಂದೆ". ಈ ಅವಹೇಳನವು ಹಿತೈಷಿಗಳೆನಿಸಿಕೊಂಡ ವ್ಯಕ್ತಿಗಳಿಂದಲೇ ಆಗಿದೆಯೆಂದು ಗಮನಿಸಿಬೇಕು[೧೧].

ಮಣಿಪಾಲದಲ್ಲಿರುವ ಸಂಸ್ಥೆಗಳನ್ನು ಗಮನಿಸಿದರೆ ಸಾರ್ವಜನಿಕ ಟೀಕೆಗಳು ವಿಮರ್ಶೆಗಳಿಂದ ತಮ್ಮ ಮನಸ್ಸನ್ನು ವಿಚಲಿತಗೊಳಿಸದೆ ತಮ್ಮ ಪೂರ್ವ ನಿರ್ಧಾರಿತ ಕಾರ್ಯಗಳನ್ನು ಮಾಧವ ಪೈಯವರು ಹಿಂತೆಗೆದುಕೊಂಡವರಲ್ಲ. ಅವರ ವ್ಯಕ್ತಿತ್ವವನ್ನು ವಿಶ್ಲೇಷಿಸಿದರೆ ಮನೋನಿಷ್ಕರ್ಷ ಮಾಡಿದ ವಿಷಯದಲ್ಲಿ ಅವರೆಂದೂ ಪುನರ್ವಿಮರ್ಷತೆ ಮಾಡಿದಂತಿಲ್ಲ.

ಸರಕಾರದಿಂದ ಬಂದಿರುವ ಸವಾಲುಗಳಿಗೂ ಹಿಂದೇಟು ಹಾಕಿದವರಲ್ಲವೆನ್ನುವುದು ಕಾಣುತ್ತದೆ. ಕೆಲಸ ಮತ್ತು ಗುರಿ ಮುಟ್ಟುವುದಕ್ಕೆ ಸ್ವಾಭಿಮಾನವನ್ನು ಬದಿಗಿಟ್ಟು ಯಾರ ಮನಸ್ಸನ್ನೂ ಒಲಿಸಲು ಅವರು ಸಿದ್ಧರಾಗಿದ್ದರು. ಇಂತಹ ನಿರ್ಧಾರ ಮತ್ತು ನಿರ್ಭೀತಿಯ ಮನಸ್ಸನ್ನು ಹೊಂದಿದ್ದ ಕಾರಣದಿಂದಲೇ ಮಾಧವ ಪೈಯವರು ಕಂಡಿದ್ದ ಕನಸುಗಳೆಲ್ಲವೂ ಸಾಕಾರಗೊಂಡಿದೆ ಎಂಬುದನ್ನು ಪ್ರಸ್ತುತ ಅಧ್ಯಯನ ಕಂಡುಕೊಂಡಿದೆ.

## ೫.೧೦. ಮುಕ್ತಾಯ

ಮಾಧವ ಪೈಯವರ ಅಭಿನಂದನಾ ಸಂದರ್ಭದಲ್ಲಿ ಕು.ಶಿ.ಹರಿದಾಸ ಭಟ್ಟರು ಮಾಧವ ಪೈಯವರ ವ್ಯಕ್ತಿತ್ವವನ್ನು ವಿವರಿಸುವ ರೀತಿ ಉಲ್ಲೇಖಾರ್ಹ. "ಮಾಧವ ಪೈಯವರದು ವಿಲಕ್ಷಣ ವ್ಯಕ್ತಿತ್ವ. ಅಪೂರ್ವ ಸಿದ್ಧಿಗಳ ಸರಮಾಲೆಯನ್ನು ಒಡಲನೂಲಿನಿಂದ ನೈಯುವಂತೆ ಜೇಡಜಾಲ ಕೊರಳನ್ನು ಧರಿಸುವ ವಿಜಯೋತ್ಸವದಲ್ಲಿರುವ ಮಾಧವ ಪೈ ಕರ್ನಾಟಕದ ಕಡುಗಲಿ. ಎಂತಹ ಸಮಸ್ಯೆಗಾದರೂ ಹಠಾತ್ತನೆ ಪರಿಹಾರ ಸೂಚಿಸಬಲ್ಲ ನಿಶಿತಮತಿ..... ಮಾತಿನಲ್ಲಾಡಿದ್ದನ್ನು ಮರುಕ್ಷಣವೇ ಕೃತಿಗಿಳಿಸಬಲ್ಲ ದೃತಿ, ಜೀವಿತಕಾಲದಲ್ಲೇ ತನ್ನ ಯೋಜನೆಗಳನ್ನು ಕಣ್ಣಾರೆ ಕಾಣುವ ಭಾಗ್ಯ, ಇದನ್ನು ಡಾ. ಪೈ ಪಡೆದು ಬಂದವರಿರಬೇಕು. ದಾರಿದ್ರ, ಅಜ್ಞಾನ, ಅಸ್ವಾಸ್ಥ್ಯ, ಈ ಮೂರು ರಾಷ್ಟ್ರೀಯ ರುಜಿನಗಳ ಮೇಲೆ ತಾನು ಸಾರಿದ ಸಮರದಲ್ಲಿ ತಾನೇ ಮುಂಚೂಣಿಯಲ್ಲಿ ನಿಂತು ಎರಗಿದ, ನಂಜಿನ ಬಾಣಗಳನ್ನು ತಾನೇ ನುಂಗಿ ಯಾವ ಸೋಲಿಗೂ ಅಂಜದೆ ಹೆಜ್ಜೆ ಇಕ್ಕಿ ಗುರಿಮುಟ್ಟಿದ ಧನ್ಯ ಜೀವಿಯವರು"[೨].

ಇಂದು ಮಣಿಪಾಲವು ಆಧುನಿಕ ಭಾರತದ ಪ್ರಗತಿಯ ಮುಂಚೂಣಿಯ ಸ್ಥಾನದಲ್ಲಿ ನಿಂತಿದೆ. ದೇಶ ವಿದೇಶಗಳನ್ನು ಜನರಿಗೆ ಆಕರ್ಷಣೆಯಾಗುವ ಶಕ್ತಿಯನ್ನು ಮಣಿಪಾಲದ ಸಂಸ್ಥೆಗಳು ಮೂಡಿಸಿವೆ. ಜ್ಞಾನ, ವಿಜ್ಞಾನಗಳ ಸಮ್ಮಿಲನದಿಂದ ಮಣಿಪಾಲವು ಒಂದು ಅಭಿನವ ವಿಶ್ವವಿದ್ಯಾನಿಲಯವೆನಿಸಿಕೊಂಡಿದೆ. ಯಾವ ಸಮಸ್ಯೆ ಇದ್ದರೂ ಅದಕ್ಕೊಂದು ಪರಿಹಾರವನ್ನು ಮಾಧವ ಪೈಗಳು ಹುಡುಕಿಕೊಂಡಿರುವುದು ಸಾಧನೆಯ ಅಡಿಪಾಯವಾಗಿದೆ. ಅವರ ದೃಷ್ಟಿಯಲ್ಲಿ ಯಾವುದೂ ವ್ಯರ್ಥವಾಗಬಾರದು, ಸಂಪಾದನೆ, ಜೀವನ, ಮನುಷ್ಯ ಶಕ್ತಿ ಹಾಗೂ ಮುಂತಾದ ಯಾವ ಕ್ಷೇತ್ರಗಳೇ ಇರಲಿ ಅದರಿಂದ ಪ್ರಯೋಜನವಾಗಬೇಕೆನ್ನುವುದೇ ಅವರ ಜೀವನದ ಧ್ಯೇಯವಾಗಿತ್ತು ಎನ್ನುವುದು ಕಾಣುತ್ತದೆ. ಪ್ರಮುಖವಾಗಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಮಾಧವ ಪೈಗಳು ತಮ್ಮ ಯೋಜನೆ, ಸಾಧನೆಗಳಿಗೆ ಯಾವುದೇ ಅರ್ಥಶಾಸ್ತ್ರದ ಪುಸ್ತಕಗಳನ್ನು ಅವಲಂಬಿಸಿದವರಲ್ಲ. ಅವರದೊಂದು ಮುಕ್ತ ಚಿಂತನಾ ಕ್ರಮವಾಗಿತ್ತು. ಲೋಕದ ಅನುಭವಗಳೇ ಸ್ಫೂರ್ತಿಯಾಗಿತ್ತು. ಮಿತಿ ಮತ್ತು ಸ್ವಂತ ಆಚರಣೆಗಳೇ ಗುರಿಯಾಗಿತ್ತು. ಅವರೊಬ್ಬ ಏಕಾಂಗಿ ಸಾಧಕನೆಂದು ಈ ಅಧ್ಯಯನವು ಸಾಕ್ಷೀಕರಿಸುತ್ತದೆ. ಇಡೀ ಭಾರತದಲ್ಲಿ ಹಾಗೂ ಅಂತರಾಷ್ಟ್ರೀಯ ಮುಟ್ಟದಲ್ಲಿ ಕಸ್ತೂರ್ಬಾ ಮೆಡಿಕಲ್ ಕಾಲೇಜು ಒಂದು ಮಾದರಿ ಸಂಸ್ಥೆ ಎನ್ನುವುದು ಜನಸಾಮಾನ್ಯರ ಅಭಿಪ್ರಾಯವಾಗಿದೆ. ಒಂದು ವಿಶ್ವವಿದ್ಯಾನಿಲಯ ನಿಜವಾಗಿ ಯಾವ ರಚನೆಯನ್ನು, ಯಾವ ವಿಶಾಲ ಮನೋಭಾವವನ್ನು ತೋರಿಸಬೇಕಾಗಿತ್ತೋ ಅದನ್ನು ಮಣಿಪಾಲವು

ಪ್ರತಿನಿಧಿಸಿದೆ. ಈಗ ಇದು ರಾಷ್ಟ್ರೀಯ ಸ್ಥಾವರ ಇಪ್ಪತ್ತೈದು ವರ್ಷಗಳಿಗೂ ಹೆಚ್ಚು ಅಭಿವೃದ್ಧಿಯ ಮಾರ್ಗದಲ್ಲಿ ಕಾಪಾಡಿಕೊಂಡು ಬಂದ ಶಿಕ್ಷಣ ಮಟ್ಟಕ್ಕೆ ನಿರ್ದಯ ಪರೀಕ್ಷಕರು, ವಿಕೃತ ಮಂಡಳಿಗಳು ತಲೆಬಾಗಿದೆ. ಇದನ್ನು ಕಟ್ಟಿ ಬೆಳೆಸುವಲ್ಲಿ ಮಾಧವ ಪೈಯವರ ಪರಿಶ್ರಮ ಅವರ ಛಲವಾದಿ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ ಎಂದರೂ ತಪ್ಪಾಗಲಾರದು.

ಕೊನೆಯದಾಗಿ ಮಾಧವ ಪೈಯವರ ಒಟ್ಟು ವ್ಯಕ್ತಿತ್ವವನ್ನು ಹೀಗೆ ಪರಿಭಾವಿಸಬಹುದು.

- ಪ್ರಾಮಾಣಿಕತೆ
- ಸಂಸ್ಕಾರಗಳನ್ನೂ, ಯೋಜನೆಗಳನ್ನೂ ಆಪತ್ತುಗಳಿಂದ ರಕ್ಷಿಸಿದ ಶ್ರೇಯಸ್ಸು
- ಸಾರ್ವಜನಿಕರಿಗಾಗಿ ಸೇವಾಭಾವ ಅಥವಾ ನಿಶ್ಚಿತವಾದ ಸಾರ್ವಜನಿಕ ಕಾಳಜಿ.
- ಸಮಾಜದ ಅನಿವಾರ್ಯ ಅವಶ್ಯಕತೆಗಳನ್ನು ಪೂರೈಸಬೇಕೆಂಬ ಮಹತ್ವಾಕಾಂಕ್ಷೆ.

ಈ ಮೇಲಿನ ಅದ್ಭುತ ಜೀವನ ಮೌಲ್ಯಗಳನ್ನು ತಮ್ಮೊಳಗೆ ಬೆಳೆಸಿಕೊಂಡ ಕಾರಣದಿಂದಲೇ ಪುಟ್ಟ ಹಳ್ಳಿಯಾಗಿದ್ದ ಮಣಿಪಾಲ ಹಾಗೂ ಉಡುಪಿಯು ರಾಷ್ಟ್ರೀಯ ಕೀರ್ತಿಗಳಿಸಿದ ಸ್ಥಳಗಳಾಗಿವೆ. ಅವರ ಎಲ್ಲಾ ಸಾಧನೆಗಳ ಹಿಂದೆ ಯಾವುದೇ ಸೈದ್ಧಾಂತಿಕ ಒಲವುಗಳಿಲ್ಲದಿರುವುದನ್ನು ಗಮನಿಸಲಾಗಿದೆ. ಅವರ ಸಾಧನೆಯ ಹಿನ್ನೆಲೆಯಲ್ಲಿ ವಸ್ತು ಸ್ಥಿತಿಗಳ ಅನುಭವ, ಹಾಗೂ ಸಾದ್ಯತೆಗಳ ಹದ್ದುಬಸ್ತಿಗಳು ಕಾಣುತ್ತದೆ.

# ಪರಾಮರ್ಶನ ಗ್ರಂಥಗಳು ಹಾಗೂ ಸಂದರ್ಶಕರ ವಿವರಗಳು


೧. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಎ.ಕೆ. ಮೊನ್ನಪ್ಪ ಪ್ರಕಾಶನ ೨೦೦೩, ದ.ಕ. ಪುಟ–೧೭, ೧೯, ೨೩.

೨. ಸಂದರ್ಶನ: ಮನೋಹರ ಪ್ರಸಾದ್; ಖ್ಯಾತ ಪತ್ರಕರ್ತರು, ಉದಯವಾಣಿ, ದಿನಪತ್ರಿಕೆ ವಿಭಾಗ, ಮಾನಸ ಟವರ್ಸ್, ಎಮ್. ಜಿ. ರಸ್ತೆ, ಮಂಗಳೂರು, ದಿನಾಂಕ–೧–೮–೨೦೧೦

೩. ಡಾ. ನಾ. ದಾಮೋದರ ಶೆಟ್ಟಿ; 'ಸಿರಿನಿವಾಸ' ಎ.ಕೆ. ಮೊನ್ನಪ್ಪ ಪ್ರಕಾಶನ ೨೦೦೩, ದ.ಕ. ಪುಟ–೧೭, ೧೯, ೨೩

೪. ಸಂದರ್ಶನ: ಜನಾರ್ಧನ ಪ್ರಭು; ಪ್ರೀತಿ ಅಪಾರ್ಟ್‌ಮೆಂಟ್ಸ್. ಕೊಡಿಯಾಲ್‌ಬೈಲ್, ಮಂಗಳೂರು, ದಿನಾಂಕ ೨೯–೭–೨೦೧೦.

೫. ಹಾರೋಗದ್ದೆ ಉಷಾ ರಮೇಶ ನಾಯಕ; 'ದ.ಕ. ಜಿಲ್ಲೆಯ ಮಹಾನ್ ಪ್ರತಿಭೆಗಳು' ಭೂಮಿಕಾ ಪ್ರಕಾಶನ ೨೦೦೫, ಪುಟ ೧೬೮, ೧೭೦.

೬. ಅದೇ, ಪುಟ – ೧೭೧.

೭. ಅದೇ, ಪುಟ ೧೭೧, ೧೭೨.

೮. ಅಡ್ಯನಡ್ಕ ಕೃಷ್ಣಭಟ್; 'ಸುದರ್ಶನ' ತೋನ್ಸೆ ಮಾಧವ ಅನಂತಪೈ ಅಭಿನಂದನಾ ಗ್ರಂಥ', ವಿಜಯಾ ಕಾಲೇಜು ಟ್ರಸ್ಟ್, ಮುಲ್ಕಿ, ದ.ಕ. ೨೯೭೭, ಪುಟ–೧, ೮.

೯. 'ಉದಯವಾಣಿ', 'ಸ್ಮೃತಿದಿನ – ಸಾಧಕರ ನೆನಪು', ದಿನಾಂಕ ೧೯–೫–೨೦೧೦, ಪುಟ ೬.

೧೦. 'ನವಯುಗ' ದಿನಪತ್ರಿಕೆ, ದೀಪಾವಳಿ ಸಂಚಿಕೆ ೧೯೬೫, ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪುಟ–೧೬, ೧೭.

೧೧. ಅಡ್ಯನಡ್ಕ ಕೃಷ್ಣಭಟ್; 'ಸುದರ್ಶನ, ತೋನ್ಸೆ ಮಾಧವ ಅನಂತ ಪೈ ಅಭಿನಂದನಾ ಗ್ರಂಥ', ವಿಜಯಾ ಕಾಲೇಜು, ಮೂಲ್ಕಿ, ದ.ಕ. ೧೯೭೭, ಪುಟ–೩.

೧೨. ಅದೇ, ಪುಟ–೧

# ಅಧ್ಯಾಯ – ೬

# ಉಪಸಂಹಾರ

ಪ್ರಸ್ತುತ ಅಧ್ಯಯನದಲ್ಲಿ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳನ್ನು, ಅವರ ನಾಯಕತ್ವದಲ್ಲಿದ್ದ ಅಭಿವೃದ್ಧಿ ಪರಿಕಲ್ಪನೆಯನ್ನು, ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗಾಗಿ ಅವರು ಶ್ರಮಿಸಿದ ರೀತಿ ನೀತಿಗಳ ಬಗ್ಗೆ ಸವಿಸ್ತಾರವಾಗಿ ಪರಿಶೀಲಿಸಲಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಹಾಗೂ ನಂತರದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಹೆಚ್ಚಿನ ಅಭಿವೃದ್ಧಿ ಹೊಂದಿರಲಿಲ್ಲವೆನ್ನುವ ವಾಸ್ತವ ಸತ್ಯವನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಜಿಲ್ಲೆಯ ಒಟ್ಟು ಸರ್ವತೋಮುಖ ಅಭಿವೃದ್ಧಿಗಾಗಿ ಆರ್ಥಿಕ, ಸಾಮಜಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ವಿಶಿಷ್ಟ ವ್ಯಕ್ತಿತ್ವದಿಂದ ಉಳ್ಳಾಲ ಶ್ರೀನಿವಾಸ ಮಲ್ಯರು ತೊಡಗಿಸಿಕೊಂಡಿದ್ದರು ಎನ್ನುವುದನ್ನು ಸಂದರ್ಶನಗಳು ಸಾಕ್ಷೀಕರಿಸಿವೆ.

ಹತ್ತಿರದಿಂದ ಉಳ್ಳಾಲ ಶ್ರೀನಿವಾಸ ಮಲ್ಯರನ್ನು ಅರಿತಿರುವ ಅವರ ಕುಟುಂಬ, ಸ್ನೇಹಬಳಗ ಹಾಗೂ ಅಭಿನಂದನಾ ಗ್ರಂಥ ಸಮಿತಿಯ ಸದಸ್ಯರನ್ನು ವೈಯಕ್ತಿಕವಾಗಿ ಸಂಪರ್ಕಿಸಿದಾಗ ಶ್ರೀನಿವಾಸ ಮಲ್ಯರ ವ್ಯಕ್ತಿತ್ವದ ಹಾಗೂ ಕ್ರಿಯಾಶೀಲತೆಯ ಹಲವು ಆಯಾಮಗಳ ಪರಿಚಯವನ್ನು ಮಾಡಿಕೊಳ್ಳಲು ಸಾಧ್ಯವಾಗಿತ್ತು. ಶಿಕ್ಷಣ ಪಡೆಯುವ ಸಂದರ್ಭದಲ್ಲಿ ಸ್ವಾತಂತ್ರ್ಯ ಚಳುವಳಿ ಹೋರಾಟಗಳಿಂದ ಆಕರ್ಷಿತರಾಗಿ ಉನ್ನತ ಡಿಗ್ರಿಯನ್ನು ಪಡೆಯುವಲ್ಲಿ ಶ್ರೀನಿವಾಸ ಮಲ್ಯರು ನಿರಾಸಕ್ತರಾಗಿರುವುದು ಗಮನಾರ್ಹ.

ಈ ಅಧ್ಯಯನದಲ್ಲಿ ನಡೆಸಿದ ವಿಶ್ಲೇಷಣೆಗಳು ಸ್ವಾತಂತ್ರ್ಯ ಹೋರಾಟದ ಕಾಲ, ಅಂದಿನ ಸಂದರ್ಭ, ಮತ್ತು ಅಭಿವೃದ್ಧಿಯ ಪಥದಲ್ಲಿ ಸಾಗಬೇಕಾಗಿದ್ದ ದೇಶದ ಪರಿಸ್ಥಿತಿ ಮುಂತಾದವುಗಳನ್ನು ಪರಿಚಯಿಸಿದೆ. ನೈಜವಾಗಿ ಒಂದು ದೇಶ, ಅಥವಾ ಜಿಲ್ಲೆ ಪ್ರಗತಿಯನ್ನು ಸಾಧಿಸಲು ಅಗತ್ಯವಾದ ರೂಪುರೇಶೆಗಳ ಆಲೋಚನೆಗಳು ಉಳ್ಳಾಲ ಶ್ರೀನಿವಾಸ ಮಲ್ಯರಿಗೆ ಇದ್ದದ್ದು ಕಾಣುತ್ತದೆ. ಮುಂದಿನ ಪೀಳಿಗೆಯವರಿಗೆ ಅಭಿವೃದ್ಧಿ ಹೀನತೆ ಉಂಬಳಿಯಾಗಬಾರದು. ಅದಕ್ಕಾಗಿ ಕಾರ್ಯೋನ್ಮುಖರಾದ ಉಳ್ಳಾಲ ಶ್ರೀನಿವಾಸ ಮಲ್ಯರ ಚಿಂತನೆ, ಕಾರ್ಯಚಟುವಟಿಕೆಗಳ ಸಂಶೋಧನೆ ಇದಾಗಿರುವುದರಿಂದ ಒಂದು ನಿರ್ಧಿಷ್ಟ ಕಾಲಘಟ್ಟ ಮತ್ತು ಸಂದರ್ಭದಲ್ಲಿ ಅಧ್ಯಯನದ ಶೋಧನೆಯಾಗಿರುತ್ತದೆ. ಆ ಕಾಲವು ಸ್ವಾತಂತ್ರ್ಯವನ್ನು ಪಡೆದ ಹೆಮ್ಮೆಯ ಕಾಲ ಮತ್ತು ಆಗಿನ ನಾಯಕರಲ್ಲಿ ರಾಜಕೀಯ ಧುರೀಣರಲ್ಲಿ ಉದಾರತೆ, ಶಿಸ್ತು, ಹಾಗೂ ಜವಾಬ್ದಾರಿಯುತ ನಡವಳಿಕೆಗಳು ಇದ್ದವು ಎನ್ನುವುದನ್ನು ಈ ಅಧ್ಯಾಯನವು ಸಾಬೀತು ಪಡಿಸಿದೆ.

ಉಳ್ಳಾಲ ಶ್ರೀನಿವಾಸ ಮಲ್ಯರ ಚಿಂತನೆ, ಸಾಧನೆಗಳು ಕೇವಲ ಒಂದು ಕ್ಷೇತ್ರಕ್ಕೆ ಸೀಮಿತಗೊಂಡವುಗಳಲ್ಲ, ಇಂದಿನ ರಾಜಕೀಯ ನಾಯಕರಿಗಿಂತಲೂ ಭಿನ್ನವಾದ ಚಿಂತನೆ, ವ್ಯಕ್ತಿತ್ವ ಹಾಗೂ ದೂರದರ್ಶಿತ್ವವು ಅವರಲ್ಲಿದ್ದವು. ಒಂದರ್ಥದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಯಲ್ಲಿ ಹೊಸ ಅಧ್ಯಾಯವನ್ನು ಅವರು ಪೂರಕವಾಗಿ ಪರಿಕಲ್ಪಿಸಿಕೊಂಡು ಶ್ರೀನಿವಾಸ

ಮಲ್ಯರು ಕಾರ್ಯಪ್ರವರ್ತರಾಗಿರುವುದು ಕಾಣುತ್ತದೆ. ಅವರ ಪ್ರಮುಖ ಆದ್ಯತೆ ಅಭಿವೃದ್ಧಿ ಹಾಗೂ ಮಾನವೀಯತೆಗೆ ಸ್ಪಂದನವಾಗಿತ್ತು. ಇಲ್ಲಿ ಅವರು ವೈಯಕ್ತಿಕ ಲಾಭಕ್ಕಾಗಿ, ಅಧಿಕಾರ ದಾಹಕ್ಕಾಗಿ, ಜನಪ್ರಿಯತೆಗಾಗಿ ದುಡಿಯುತ್ತಿದ್ದರು ಎನ್ನುವುದು ಕಾಣುವುದಿಲ್ಲ. ಜನತೆಗಾಗಿ ಸರ್ವಸ್ವವನ್ನು ತ್ಯಾಗ ಮಾಡಿದ ಒಬ್ಬ ನಿಷ್ಠಾವಂತ ರಾಜಕಾರಣಿಯಾಗಿದ್ದರು ಎನ್ನುವುದನ್ನು ಅನೇಕ ಹಿರಿಯರು ವ್ಯಕ್ತಪಡಿಸಿರುವುದು ಅಧ್ಯಯನಕ್ಕೆ ಅನುಕೂಲಕಾರಿಯಾಗಿತ್ತು. ಅವರ ಚಟುವಟಿಕೆಗಳೆಲ್ಲವೂ ಕಾನೂನುಗಳ ಚೌಕಟ್ಟಿನೊಳಗೆ ಸೀಮಿತವಾಗಿತ್ತು ಎನ್ನುವುದು ಗಮನಾರ್ಹ.

ಈ ಮೊದಲೇ ತಿಳಿದಿರುವಂತೆ ಮೊದಲ ಅಧ್ಯಾಯವು ಅಭಿವೃದ್ಧಿ, ಮತ್ತು ಆ ಬಗ್ಗೆ ಸಾಧನೆ ಸವಲುಗಳ ವಿಶ್ಲೇಷಣೆಯಾಗಿದೆ. ಎರಡನೆಯದಾಗಿ ಉಳ್ಳಾಲ ಶ್ರೀನಿವಾಸ ಮಲ್ಯರ ವ್ಯಕ್ತಿತ್ವದ ಮಜಲುಗಳನ್ನು ತಿಳಿಯಲು ಕುಟುಂಬ, ಬಾಲ್ಯ, ದಾಂಪತ್ಯ ಮೊದಲಾದ ವಿಷಯಗಳಲ್ಲಿ ಆಸಕ್ತಿಯನ್ನು ತೋರಲಾಗಿದೆ.

ಮೂರನೇ ಅಧ್ಯಾಯವು ಅವರ ಸ್ವಾತಂತ್ರ್ಯ ಹೋರಾಟ, ರಾಷ್ಟ್ರ ಮತ್ತು ಜಿಲ್ಲಾ ರಾಜಕಾರಣದಲ್ಲಿ ವಿಶೇಷವಾಗಿ ತೊಡಗಿಸಿಕೊಂಡಿದ್ದ ರೀತಿ, ನೆಹರು, ಶಾಸ್ತ್ರಿ, ಜಯಪ್ರಕಾಶ್ ನಾರಾಯಣ್ ಮೊದಲದ ಅಂದಿನ ಪ್ರಸಿದ್ಧ ನಾಯಕರೊಡನೆ ಉಳ್ಳಾಲ ಶ್ರೀನಿವಾಸ ಮಲ್ಯರಿಗಿದ್ದ ಸಂಪರ್ಕ ಇತ್ಯಾದಿಗಳ ಬಗ್ಗೆ ಬೆಳಕು ಚೆಲ್ಲಿದೆ. ನಾಲ್ಕನೇ ಅಧ್ಯಾಯವು ಉಳ್ಳಾಲ ಶ್ರೀನಿವಾಸ ಮಲ್ಯರ ರಾಜಕೀಯ ಚಟುವಟಿಕೆಗಳ ಪರಿಮಿತಿಯನ್ನು ದಾಟಿ ಸವಿಸ್ತಾರವಾಗಿ ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾಡಿದ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಯನ್ನು ವಿಶ್ಲೇಷಿದೆ. ಈ ಸಂದರ್ಭದಲ್ಲಿ ಕಂಡಿರುವ ಸತ್ಯಗಳೆಂದರೆ ಹಲವಾರು ಕಂಪನಿಗಳು, ವಸತಿ ಸಂಕೀರ್ಣಗಳು, ಕಾರ್ಖಾನೆಗಳು ವಿಮಾನ ನಿಲ್ದಾಣ, ಬಂದರು, ರಾಷ್ಟ್ರೀಯ ಹೆದ್ದಾರಿ, ದೇವಾಲಯ, ಶೈಕ್ಷಣಿಕ ಸಂಸ್ಥೆ, ಸಹಕಾರಿ ಸಂಘ ಮುಂತಾದುವುಗಳ ಅಸ್ತಿತ್ವಕ್ಕೆ ಶ್ರೀನಿವಾಸ ಮಲ್ಯರ ನೀಡಿರುವ ಸೇವೆಯನ್ನು ಕೂಲಂಕುಶವಾಗಿ ಗುರಿತಿಸಿಕೊಳ್ಳಲಾಗಿದೆ. ಐದನೇ ಅಧ್ಯಾಯದಲ್ಲಿ, 'ಮಣಿಪಾಲದ ಶಿಲ್ಪಿ' ಶ್ರೀನಿವಾಸ ಮಲ್ಯರ ಸೇವೆಯನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಲಾಗಿದೆ.

ಈ ಎಲ್ಲಾ ಅಧ್ಯಾಯಗಳನ್ನು ರೂಪಿಸುವಾಗ ಸಾರ್ವಜನಿಕರೊಡಗಿನ ಮಾತುಕತೆ, ಹಲವು ಮುಖಂಡರ ಭೇಟಿ ಹಾಗೂ ಪರಾಮರ್ಶನ ಗ್ರಂಥಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿತ್ತು. ಅಧ್ಯಯನದ ಉದ್ದಕ್ಕೂ ಉಳ್ಳಾಲ ಶ್ರೀನಿವಾಸ ಮಲ್ಯರು ಸ್ವಜನ ಹಿತಕ್ಕಾಗಿ, ವೈಯ್ಯಕ್ತಿಕ ಅನುಕೂಲಕ್ಕಾಗಿ ಅಧಿಕಾರವನ್ನು ಮರೆಯುವುದಕ್ಕಾಗಿ ತನಗೊದಗಿದ ಅವಕಾಶಗಳನ್ನು ಎಂದೂ ದುರುಪಯೋಗ ಪಡಿಸಿಕೊಂಡಿಲ್ಲವೆನ್ನುವುದನ್ನು ಗಮನಿಸಬೇಕು.

ಉಳ್ಳಾಲ ಶ್ರೀನಿವಾಸ ಮಲ್ಯರ ಬಗ್ಗೆ ಸಂಶೋಧನೆಯನ್ನು ಕೈಗೊಂಡಿರುವ ಉದ್ದೇಶವೇ ಅವರನ್ನು ಪ್ರಸ್ತುತ ಪೀಳಿಗೆಗೆ ಪರಿಚಯಿಸುವುದಕ್ಕಾಗಿ ಅವರ ವ್ಯಕ್ತಿತ್ವದ ಶ್ರೇಷ್ಠತೆಯನ್ನು ತಿಳಿಯಲು ಪುಸ್ತಕ ಲೇಖನ ಹಾಗೂ ೧೯೪೭–೫೦ ರ ದಶಕದ ದೇಶಬಂಧು, ನವಯುಗ, ರಾಷ್ಟ್ರಮತ ಮುಂತಾದ ಪತ್ರಿಕೆಯ ಪ್ರಕಟಣೆಗಳನ್ನು ಉಡುಪಿಯ ಗೋವಿಂದ ಪೈ ಸಂಶೋಧನಾ ಕೇಂದ್ರದಿಂದ ಪಡೆಯಲಾಗಿತ್ತು. ಸಂಶೋಧನೆಯ ವಸ್ತು ವಿಷಯಗಳನ್ನು ಸಮರ್ಥಿಸಿಕೊಳ್ಳಲು ಉಳ್ಳಾಲ ಶ್ರೀನಿವಾಸ ಮಲ್ಯರ ಸಮಕಾಲೀನರಾದ ಅನೇಕ ನಾಯಕರ ಬಗೆಗಿನ ಸಾಹಿತ್ಯ ಗ್ರಂಥಗಳನ್ನು ಮೆಲುಕು ಹಾಕಲಾಗಿದೆ. ಉಳ್ಳಾಲ ಶ್ರೀನಿವಾಸ

ಮಲ್ಯರ ಕುರಿತಾದ ಬರಹಗಳು ಬಹಳಷ್ಟು ಸವಿಸ್ತಾರವಾಗಿಲ್ಲ. ಅದರಲ್ಲೂ ಅವರ ರಾಷ್ಟ್ರ ರಾಜಕಾರಣ ಕುರಿತಂತೆ ಮಾಹಿತಿಗಳು ಅತ್ಯಲ್ಪವಾಗಿತ್ತು. ಇದರಿಂದಾಗಿ ಉಳ್ಳಾಲ ಶ್ರೀನಿವಾಸ ಮಲ್ಯರ ರಾಷ್ಟ್ರ ರಾಜಕಾರಣ ಕುರಿತಾದ ಆಳವಾದ ವಿಶ್ಲೇಷಣೆ ಪ್ರಸ್ತುತ ಅಧ್ಯಯನದಲ್ಲಿ ಸಾಧ್ಯವಾಗಿಲ್ಲವೆನ್ನುವುದು ಈ ಪ್ರಯತ್ನಕ್ಕೆ ಸಿಕ್ಕಿದ ಇತಿಮಿತಿಯಾಗಿದೆ.

ಅವರ ರಾಜಕೀಯ ನಾಯಕತ್ವವನ್ನು ಪರಿಶೀಲಿಸುವಾಗ ಅವರೊಬ್ಬ ನಿಷ್ಠುರ ರಾಜಕಾರಣಿಯಾಗಿದ್ದರು ಮತ್ತು ಜನತೆಯ ಪರವಾಗಿ ಸೇವೆ ಮಾಡುವಂತಹ ವಿಶಿಷ್ಠ ಬೌದ್ಧಿಕತೆಯನ್ನು ಹೊಂದಿದ್ದರು ಎನ್ನುವುದು ಸತ್ಯ. ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಸಂಸದೀಯರು, ಹಾಗೂ ಕಾಂಗ್ರೇಸ್ ಪಕ್ಷದ ಮುಂದಾಳುತನವನ್ನು ಮೆರೆದವರು ಎನ್ನುವುದನ್ನು ಅಧ್ಯಯನವು ಕಂಡುಕೊಂಡಿದೆ. ಈಗಿನ ರಾಜಕಾರಣದಲ್ಲಿರುವ ಪ್ರಚಾರ ಪ್ರಿಯತೆಯಲ್ಲಿಯೂ ಉಳ್ಳಾಲ ಶ್ರೀನಿವಾಸ ಮಲ್ಯರ ಹಾದಿಯಲ್ಲಿ ಕಂಡುಬರುವುದಿಲ್ಲ.

ಹಾಗೆಯೇ ಆರ್ಥಿಕ ಮತ್ತು ಸಾಮಾಜಿಕ ರಂಗಗಳನ್ನು ಪರಿಶೀಲಿಸಿದರೆ ಒಬ್ಬ ವ್ಯಕ್ತಿ ತನ್ನ ಜೀವಿತ ಕಾಲದಲ್ಲಿ ಎಷ್ಟು ಜನ ಪರ ಹಿತಕ್ಕಾಗಿ ದುಡಿಯಬಹುದು ಎನ್ನುವುದನ್ನು ಕಾಣಬಹುದು. ಇಂದಿನ ಪೀಳಿಗೆಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಕೊಡುಗೆಗಳನ್ನು ತಿಳಿಯಪಡಿಸಲು ಕೆಲವೊಮ್ಮೆ ಶಬ್ದಗಳ ಕೊರತೆ ಕಾಣಬಹುದು. ಅವರೊಬ್ಬ ಆದರ್ಶವ್ಯಕ್ತಿ ಎಂದೇ ಅಧ್ಯಯನವು ಪರಿಗಣಿಸುತ್ತದೆ.

**ಒಟ್ಟಿನಲ್ಲಿ ಅಧ್ಯಯನವು ಹೊರತಂದ ಪ್ರಮುಖ ಅಂಶಗಳನ್ನು ಈ ಕೆಳಗಿನಂತೆ ಹೇಳಬಹುದು.**

- ಉಳ್ಳಾಲ ಶ್ರೀನಿವಾಸ ಮಲ್ಯರ ಕುರಿತಾದ ವಿವಿಧ ನೆಲೆಗಳನ್ನು ವಿಶ್ಲೇಷಿಸಿಕೊಂಡಾಗ ನಾಯಕತ್ವದ ವೈಖರಿಯ ಹೊಸ ಪ್ರಪಂಚವೇ ನಮ್ಮ ಮುಂದೆ ತೆರೆಯುತ್ತದೆ. ವಿವಿಧ ಕ್ಷೇತ್ರಗಳಲ್ಲಿ ಅವರಿಗಿದ್ದ ಅಪಾರ ಆಸಕ್ತಿ, ಹಾಗೂ ಪರಿಜ್ಞಾನದ ಬಗ್ಗೆ ವಿಶೇಷ ಮಾಹಿತಿಗಳು ಲಭ್ಯವಾಗಿವೆ.
- ಸಂಶೋಧನೆಗೆ ಬಳಸಿಕೊಂಡ ಎಲ್ಲಾ ವಿಧಾನಗಳೂ ಅವರ ವೈಶಿಷ್ಟ್ಯತೆಯನ್ನು ಪ್ರತಿಬಿಂಬಿಸಿದೆ. ಅವರು ಅಭಿವೃದ್ಧಿಗಾಗಿ ಕೈಗೊಂಡಿರುವ ಎಲ್ಲಾ ಪ್ರಯತ್ನಗಳ ವ್ಯಾಪ್ತಿಯನ್ನು ಸಾಕ್ಷ್ಯಾಧಾರಗಳ ಮೂಲಕ ಪ್ರತಿನಿಧಿಸುವ ಕೆಲಸವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಆಧುನಿಕ ಭಾರತದ ಹಾಗೂ ವಿಶೇಷವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಹಲವು ನಾಯಕರುಗಳ ಪೈಕಿ ಉಳ್ಳಾಲ ಶ್ರೀನಿವಾಸ ಮಲ್ಯರು ಒಂದು ಪ್ರತ್ಯೇಕ ಸ್ಥಾನವನ್ನು ಗಳಿಸಿಕೊಂಡಿರುತ್ತಾರೆ. ಅದಕ್ಕೆ ಅನೇಕ ಕಾರಣಗಳಿವೆ. ಅದನ್ನೇ ಪ್ರಸ್ತುತ ಅಧ್ಯಯನವು ಹೊರತಂದಿದೆ.
- ಉಳ್ಳಾಲ ಶ್ರೀನಿವಾಸ ಮಲ್ಯರ ಕಾರ್ಯಗಳೆಲ್ಲವೂ ಪ್ರಾಯೋಗಿಕವಾಗಿದೆ. ಅವರೊಬ್ಬ ಸರಳ ಹಾಗೂ ನೇರ ಸ್ವಭಾವದ ರಾಜಕಾರಣಿಯಾಗಿದ್ದರು. ದೇಶಕ್ಕಾಗಿ ತನ್ನ ಯೌವ್ವನ, ಹಾಗೂ ಉನ್ನತ ಶಿಕ್ಷಣವನ್ನೇ ಮುಡಿಪಾಗಿಟ್ಟವರು. ಸ್ವಪ್ರಯತ್ನ ಹಾಗೂ ಸ್ವಾನುಭವಗಳೆರಡೂ ಅವರ ವ್ಯಕ್ತಿ ವಿಶೇಷತೆಗಳಾಗಿವೆ.
- ಮಣಿಪಾಲದ ತೋನ್ಸೆ ಮಾಧವ ಪೈಯವರ ಸಾಧನೆಗಳು ಒಂದು ಸೀಮಿತ ಪ್ರದೇಶಕ್ಕೆ ಮಾತ್ರ ಗುರುತಿಸಿಕೊಂಡಿದೆ.

ಮಾಧವ ಪೈ ಶಿಕ್ಷಣ ಮತ್ತು ವೈದ್ಯಕೀಯ, ತಾಂತ್ರಿಕ ಸಂಸ್ಥೆಗಳ ಹರಿಕಾರರಾದರೆ ಉಳ್ಳಾಲ ಶ್ರೀನಿವಾಸ ಮಲ್ಯರು ದಕ್ಷಿಣ ಕನ್ನಡದ ಒಟ್ಟು ಪ್ರಗತಿಗಾಗಿ ಬೇಕಾದ ಹಲವಾರು ಆರ್ಥಿಕ ಹೆದ್ದಾರಿಗಳನ್ನು ತೆರೆದವರು. ವಿಮಾನ ನಿಲ್ದಾಣದ ಬಂದರುಗಳ ಮೂಲಕ ದಕ್ಷಿಣ ಕನ್ನಡ ಜಿಲ್ಲೆಯನ್ನು ಅಂತರಾಷ್ಟ್ರೀಯ ಸಮಾಜಕ್ಕೆ ಸಂಪರ್ಕಿಸಿದವರು. ಆದುದರಿಂದ ಅವರ ಕಾರ್ಯಕ್ಷೇತ್ರಗಳು ಶ್ರೀಯುತ ಟಿ. ಯಮ್. ಎ. ಪೈ ಯವರಿಗಿಂತಲೂ ವ್ಯಾಪಕವಾಗಿದೆ. ದುರ್ಬಲ ಜನರ ಏಳಿಗೆಗಾಗಿಯೂ ಅವರು ಶ್ರಮಿಸಿದ್ದರು ಎನ್ನುವುದು ಗಮನಾರ್ಹ.

- ಸಾರ್ವಜನಿಕ ಅಭಿವೃದ್ಧಿಗಾಗಿ ಒಬ್ಬ ನಾಯಕನು ಎಂತಹ ಪ್ರಯತ್ನಗಳನ್ನೂ ಮಾಡಬಹುದು ಎನ್ನುವುದು, ಕಾನೂನಾತ್ಮಕವಾಗಿ ಒಟ್ಟು ಸಮಾಜಕ್ಕಾಗಿ ಏನೆಲ್ಲ ಸೌಕರ್ಯಗಳನ್ನು ನೀಡಬಹುದು ಎನ್ನುವುದು ಹಾಗೂ ನಿಸ್ವಾರ್ಥ ಸೇವಾಭಾವಕ್ಕೆ ಉಳ್ಳಾಲ ಶ್ರೀನಿವಾಸ ಮಲ್ಯರು ಕೈಗನ್ನಡಿ ಎನ್ನುವುದನ್ನು ಅಧ್ಯಯನವು ಪರಿಗಣಿಸಿದೆ.
- ಅಭಿವೃದ್ಧಿಯ ಬಗ್ಗೆ ಉಳ್ಳಾಲ ಶ್ರೀನಿವಾಸ ಮಲ್ಯರು ಚಿಂತಿಸಲು ಮೂಲ ಪ್ರಭಾವವೇ ಮಹತ್ಮಾ ಗಾಂಧಿ ಬಾಲ್ಯದಲ್ಲಿಯೇ ಶ್ರೀನಿವಾಸ ಮಲ್ಯರು ಗಾಂಧೀ ತತ್ವಗಳಿಂದ ಪ್ರಭಾವಿತರಾಗಿದ್ದರು. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಎಲ್ಲಾ ಜನರು ಭಾಗಿಯಾಗಬೇಕೆನ್ನುವುದು ಶ್ರೀನಿವಾಸ ಮಲ್ಯರ ಗುರಿಯಾಗಿತ್ತು.
- ಒಟ್ಟು ಸಂಶೋಧನೆಯಲ್ಲಿ ರೂಪಿಸಿಕೊಂಡಿದ್ದ ಉದ್ದೇಶಗಳೆಲ್ಲವನ್ನೂ ಮರುವಿವೇಚಿಸಿ ವಿವಿಧ ಅಧ್ಯಾಯದಲ್ಲಿ ದೃಢೀಕರಿಸಲಾಗಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿರುವುದು ಉಪ್ಪಿನ ಸತ್ಯಾಗ್ರಹ, ಕ್ವಿಟ್ ಇಂಡಿಯ ಚಳವಳಿಯಲ್ಲಿ ಸರೆಮನೆವಾಸ, ಕಾಂಗ್ರೇಸ್ ಪಕ್ಷದ ಸದಸ್ಯತ್ವ, ಪಾರ್ಲಿಮೆಂಟಿಗೆ ಆಯ್ಕೆ, ಮುಂತಾದ ರಾಜಕೀಯ ಕ್ರಿಯಾಶೀಲತೆಯನ್ನು ದಾಖಲಿಸುವುದರ ಜೊತೆಗೆ ಆರ್ಥಿಕವಾಗಿ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿನ ಕೊಡುಗೆಗಳ ಪರಿಶೀಲನೆ, ಕೇಂದ್ರದ ಆರ್ಥಿಕ ನೆರವು ಪಡೆದ ರೀತಿ, ನವಮಂಗಳೂರು ಬಂದರು, ಹಾಸನ–ಮಂಗಳೂರು ರೈಲುಮಾರ್ಗ ಇತ್ಯಾದಿಗಳನ್ನೂ ವಿವರಿಸಲಾಗಿದೆ.
- ಆದರೆ ಅಧ್ಯಯನದಲ್ಲಿ ಮೊದಲೇ ಊಹಿಸಿಕೊಂಡಂತೆ ಜನ ಸಾಮಾನ್ಯರಲ್ಲಿ ಉಳ್ಳಾಲ ಶ್ರೀನಿವಾಸ ಮಲ್ಯರ ಬಗ್ಗೆ ಕೃತಜ್ಞತೆಯ ಭಾವನೆಗಳ ಕೊರತೆ ಇದೆ. ಕೆಲವೇ ಜನರಿಗೆ ಉಳ್ಳಾಲ ಶ್ರೀನಿವಾಸ ಮಲ್ಯರ ಬಗ್ಗೆ ತಿಳಿದಿದೆ. ಯುವ ಪೀಳಿಗೆಗೆ ಅವರ ಬಗ್ಗೆ ಮಾಹಿತಿಗಳಿಲ್ಲ.
- ಊಹೆಯಂತೆ ಉಳ್ಳಾಲ ಶ್ರೀನಿವಾಸ ಮಲ್ಯರ ಆದರ್ಶವ್ಯಕ್ತಿತ್ವವನ್ನು ಯಾರೂ ಮಾದರಿಯಗಿ ಸ್ವೀಕರಿಸಿಲ್ಲ, ಸ್ವಾರ್ಥಪರ ರಾಜಕಾರಣದಲ್ಲಿ ಅವರ ಜೀವನ ಮೌಲ್ಯಗಳೆಲ್ಲವೂ ಮೂಲೆಗುಂಪಾಗಿರುವುದನ್ನು ಈ ಅಧ್ಯಯನವು **ಮನಗಂಡಿದೆ.**

**ಮುಕ್ತಾಯ**

ಯಾವ ಸದ್ದು ಗದ್ದಲವಿಲ್ಲದೆ ಜೀವಿತ ಕಾಲದಲ್ಲಿ ಜಿಲ್ಲೆಯನ್ನು ಅಭಿವೃದ್ಧಿಗೊಳಿಸಲು ತೋರಿದ ಪ್ರಯತ್ನ ಶ್ಲಾಘನೀಯ. ಬಹು ಮುಖ್ಯ ವಿಚಾರವೆಂದರೆ ತಮ್ಮ ರಾಜಕೀಯ ವರ್ಚಸ್ಸನ್ನು ಜಿಲ್ಲೆಯ ಅಭಿವೃದ್ಧಿಗೆ ಪೂರಕವಾದ ಕಾರ್ಯಗಳನ್ನು ಸರ್ಕಾರವು ಸಕಾಲದಲ್ಲಿ ಕೈಗೊಳ್ಳುವಂತೆ ಮಾಡಿದ್ದೇ ಅವರ ಹಿರಿಮೆ ಹಾಗೂ ಜನಪರ ಕೆಲಸ ಮಾಡಲು ಪ್ರಚಾರ, ಸಾರ್ವಜನಿಕ ಸಭೆ ಸಮಾರಂಭಗಳ ಅಗತ್ಯವಿಲ್ಲ ಎಂದು ತೋರಿಸಿಕೊಟ್ಟವರೇ ಉಳ್ಳಾಲ ಶ್ರೀನಿವಾಸ ಮಲ್ಯರು ಎನ್ನುವುದು ಮನವರಿಕೆಯಾಗಿದೆ. ಅವರೊಬ್ಬ ಚಾಣಾಕ್ಷ ರಾಜಕಾರಣಿ ಹಾಗೂ ಮೌನ ಸಾಧಕರು ಎನ್ನುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

## ಅನುಬಂಧ ೧

## ಅಧ್ಯಯನದ ಮಾಹಿತಿ ಸಂಗ್ರಹಣೆಯ ಸಂದರ್ಭದಲ್ಲಿ ಭೇಟಿಯಾದ ವ್ಯಕ್ತಿಗಳ ವಿವರಗಳು

(೧) ಶ್ರೀಯುತ ಜನಾರ್ಧನ ಪ್ರಭು,

ವ್ಯಾಪಾರಸ್ತರು,

ಪ್ರೀತಿ ಅಪಾರ್ಟ್‌ಮೆಂಟ್ಸ್,

ಕೊಡಿಯಾಲ್‌ಬೈಲ್,

ಮಂಗಳೂರು

ದೂರವಾಣಿ ಸಂಖ್ಯೆ: ೯೪೪೮೧೪೨೭೮೦

(೨) ಶ್ರೀಯುತ ಉಳ್ಳಾಲ ನರಹರಿ ಮಲ್ಯ ಬಿ.ಇ.,

ನಿವೃತ್ತ ಅಭಿಯಂತರರು,

ಮನೆನಂಬ್ರ ೧೧-೧೧-೧೧೭೭,

ಮುಖ್ಯ ಪ್ರಾಣ ದೇವಸ್ಥಾನ ರಸ್ತೆ,

ಮಂಗಳೂರು.

ದೂರವಾಣಿ ಸಂಖ್ಯೆ: ೯೪೫೯೭೨೮೦೩೪

(೩) ಶ್ರೀಯುತ ಉಳ್ಳಾಲ ಮೋಹನ ಮಲ್ಯ,

ನಿವೃತ್ತ ಅಭಿಯಂತರರು,

ಲೀಲಾ ಮೆನ್‌ಶಿಯಾನ್,

ಎಮ್.ಜಿ.ರೋಡು,

ಮಂಗಳೂರು.

ದೂರವಾಣಿ ಸಂಖ್ಯೆ: ೦೮೨೪-೨೫೯೧೮೫

(೪) ಡಾ. ನಾ. ದಾಮೋದರ ಶೆಟ್ಟಿ,

ಉಪನ್ಯಾಸಕರು (ಕನ್ನಡ ವಿಭಾಗ ಮುಖ್ಯಸ್ಥರು),

ಸಂತ ಎಲೋಸಿಯಸ್ ಕಾಲೇಜು,

ಮನೆ ವಿಳಾಸ: ಭಾರತಿ ನಗರ, ಬಿಜೈ, ಮಂಗಳೂರು,

ದೂರವಾಣಿ ಸಂಖ್ಯೆ: ೯೪೪೮೧೯೧೨೫೯

(೫) ಶ್ರೀಯುತ ಎಮ್. ಮುಕುಂದ ಪ್ರಭು,

ಸೋಪ್ ಕೆಮಿಸ್ಟ್,

ಬಿಜೈ, ನ್ಯೂರೋಡು,

೨.೯-೭೨೯/೧

ಮಂಗಳೂರು-೫೭೫೦೦೪,

ದೂರವಾಣಿ ಸಂಖ್ಯೆ:೦೮೨೪-೨೨೧೧೨೧೯

(೬) ಶ್ರೀಯುತ ಮನೋಹರ ಪ್ರಸಾದ,

ಖ್ಯಾತ ಪತ್ರಕರ್ತರು,

ಉದಯವಾಣಿ ಪತ್ರಿಕೆ ವಿಭಾಗ,

ಮಾನಸ ಟವರ್ಸ್, ಎಮ್.ಜಿ.ರೋಡ್,

ಮಂಗಳೂರು,

ದೂರವಾಣಿ ಸಂಖ್ಯೆ: ೯೮೪೫೨೪೩೨೦೭

# ಅನುಬಂಧ ೨

## ಪತ್ರಿಕಾ ವರದಿಗಳು, ದಾಖಲಿತ ಪ್ರಕಟಣೆಗಳು

೧. ‘ನವಯುಗ’ ದಿನಪತ್ರಿಕೆ: ೧೮ನೇ ಜುಲಾಯಿ, ೧೯೪೬ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೨. ‘ನವಯುಗ’ ದಿನಪತ್ರಿಕೆ ಸಂಪುಟ, ೩೧ನೇ ಡಿಸೆಂಬರ್ ೧೯೬೪. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೩. ‘ನವಯುಗ’ ದಿನಪತ್ರಿಕೆ, ೧೭ನೇ ಫೆಬ್ರವರಿ ೧೯೫೫ ಸಂಚಿಕೆ; ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೪. ‘ರಾಷ್ಟ್ರಬಂಧು’ ದಿನಪತ್ರಿಕೆ; ಸಂಚಿಕೆ ೨೭, ೧೯೪೬ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೫. ‘ರಾಷ್ಟ್ರಬಂಧು’ ದಿನಪತ್ರಿಕೆ, ೧೯೫೦, ಪುಟ ೭೬ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೬. ರಾಷ್ಟ್ರಮತ’ ದಿನಪತ್ರಿಕೆ; ೧೯೩೮, ಪುಟ ೧೩ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೭. ‘ಉದಯವಾಣಿ’ ದಿನಪತ್ರಿಕೆ; ‘ಸ್ಮೃತಿ–ಸಾಧಕರ ನೆನಪು’ ದಿನಾಂಕ ೨೯ನೇ ಮೇ ೨೦೧೦.

೮. ‘ನವಯುಗ’ ದಿನಪತ್ರಿಕೆ; ‘ದೀಪಾವಳಿ ಸಂಚಿಕೆ ೧೯೬೫, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೯. ‘ನವಯುಗ’ ದಿನಪತ್ರಿಕೆ; ಸಂಚಿಕೆ ೨೦, ೧೯೫೭ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ.

## ಪರಾಮರ್ಶನ ಗ್ರಂಥಗಳು


೧. ಪ್ರೊ. ಜಿ. ಸುಬ್ರಮಣ್ಯ; "ಭಾರತೀಯ ಸಮಾಜದ ಸಮಾಜ ಶಾಸ್ತ್ರ; ಎಸ್.ಬಿ.ಎಸ್.ಪಬ್ಲಿಷರ್ಸ್ ಆಂಡ್ ಡಿಸ್ಟ್ರಿಬ್ಯೂಟರ್ಸ್, ಜನವರಿ ೨೦೦೨ – (ಪುಟ ೮೭, ೮೯).

೨. ಚ. ನ. ಶಂಕರ್‌ರಾವ್; 'ಸಮಾಜ ಶಾಸ್ತ್ರ', ಜೈಭಾರತ್ ಪ್ರಕಾಶನ, ಮಂಗಳೂರು ೧೯೯೮.

೩. Dr. Richard Pais 'Indian Society Rural and Urban', Mangala Publications – 2006.

೪. ಪ್ರೊ. ಪಿ. ಜಿ. ನಾಗನೂರಿ ಪ್ರೊ.ಬಿ. ರಮಾನಾಥ ಭಾರತೀಯ ಸಮಾಜ' ಶ್ರುತಿ ಪ್ರಕಾಶನ ಕಟಪಾಡಿ, ೨೦೦೪.

೫. M. Nanjammanni; 'Study of Indian Society Shrath; Printers and Publishers Pvt. Ltd., Baikampady, 1992.

೬. Ramnath 'Principle of Sociology' Sharma Media Promoters & Publications, Bombay 1931.

೭. G. R. Madan 'Introduction to Sociology' Allied Publishers, 1979.

೮. M. L. Jhingen 'The Economics of Development and Planning', Vani Educational Books.

೯. ಡಾ. ಪ್ರಭಾಕರ ಶಿಶಿಲ; 'ಅರ್ಥ ವಿಜ್ಞಾನದ ಮೂಲ ತತ್ವಗಳು' ಮಂಗಳ ಪ್ರಕಾಶನ – ೨೦೦೦.

೧೦. Dr. Jaya Kumar Shetty & Dr. Jayavanth Nayak "Economics of Development" Mangala Publications, 2008.

೧೧. Benjamin Higgins; "Economic Development" Central Book Depot, Allahabad – 1982.

೧೨. D. S. Savarkar; "Modern Economic Development of Great Powers" Vora & Co., Publications, Bombay 1943.

೧೩. ಒಡೆಯರ್ ಹೆಗ್ಗಡೆ; 'ಅಭಿವೃದ್ಧಿ ದೇಶಗಳ ಆಧುನಿಕ ಆರ್ಥಿಕಾಭಿವೃದ್ಧಿ ಪದ್ಮ ಪ್ರಕಾಶನ, ಬೆಂಗಳೂರು, ೧೯೮೬.

೧೪. ಕೆ. ಡಿ. ಬಸವಾ; "ಆಧುನಿಕ ಭಾರತದ ಆರ್ಥಿಕ ಅಭಿವೃದ್ಧಿ" ವಿದ್ಯಾವಾಹಿನಿ ಪ್ರಕಾಶನ, ಹುಬ್ಬಳ್ಳಿ.

೧೫. ಪ್ರೊ. ಅಬ್ದುಲ್ ಅಜೀಜ್ ಕೆ.ಜಿ, 'ಕರ್ನಾಟಕದ ಆರ್ಥಿಕತೆ' ವಾಸುಕಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭.

೧೬. ಎಚ್ಚಾರ್ಕೆ; "ಆರ್ಥಿಕ ಸಿದ್ಧಾಂತ" ಎಸ್.ಬಿಸ್.ಪಬ್ಲಿಷರ್ಸ್ ಆಂಡ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು ೧೯೯೯.

೧೭. ಡಾ. ಪ್ರಭಾಕರ ಶಿಶಿಲ; 'ಆರ್ಥಿಕ ಚಿಂತನವಾಹಿನಿ' ಮಂಗಳ ಪ್ರಕಾಶನ, ಮಂಗಳೂರು ೨೦೦೨.

೧೮. ಎಚ್ಚೆರ್ಕೆ; 'ಆರ್ಥಿಕ ಚಿಂತನೆ' ಯು.ಬಿ.ಎಸ್. ಪಬ್ಲಿಷರ್ಸ್ ಆಂಡ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು ೨೦೦೨.

೧೯. V. B. Hans 'Economics of Development', Mangala Publications 2000.

೨೦ D. N. Dwived; 'Principles of Economics' Vani Educational Books, 1985.

೨೧. Vishnu Bhagawan; 'Public Administration', S. Chand Company Ltd. New Delhi, 1990.

೨೨. ಪ್ರೊ. ಎಸ್. ಕೆ. ಕಬ್ಬೂರಿ; ಸಾರ್ವಜನಿಕ ಆಡಳಿತ' ವೀಣಾ ಪಬ್ಲಿಕೇಶನ್ಸ್, ಬೆಂಗಳೂರು.

೨೩. S. R. Nigam; 'Principles of Public Administration' Kitab Mahal, Allahabad 1974.

೨೪. A. R. Tyagi; "Public Administration", Atma Ram & Sons-1975.

೨೫. ಪ್ರೊ. ಎಚ್. ಎಂ. ರಾಜಶೇಖರ; 'ಭಾರತ ಸರ್ಕಾರ ಮತ್ತು ರಾಜಕೀಯ" ಕಿರಣ ಪ್ರಕಾಶನ ಮೈಸೂರು ೧೯೫೦.

೨೬. ಪ್ರಭಾಕರ ಶಿಶಿಲ; 'ಆರ್ಥಿಕ ಅಭಿವೃದ್ಧಿಯ ವಿಜ್ಞಾನ' ಮಂಗಳ ಪ್ರಕಾಶನ, ಮಂಗಳೂರು ೨೦೦೨.

೨೭. ಡಾ. ಪ್ರಭಾಕರ ಶಿಶಿಲ; 'ಅಭಿವೃದ್ಧಿ ಮತ್ತು ಯೋಜನಾ ಅರ್ಥಶಾಸ್ತ್ರ', ಕಲಾಪ್ರಕಾಶನ, ಬೆಂಗಳೂರು ೧೯೯೭.

೨೮. ಪ್ರೊ. ಕೆ. ಸಿ. ಬಸಪ್ಪ; 'ಆರ್ಥಿಕ ಚಿಂತನೆಯ ಪ್ರದೀಪಕರು', ಮೈತ್ರಿ ಪ್ರಕಾಶನ, ಅರಸೀಕೆರೆ, ೨೦೦೦.

೨೯. Dr. S. Udayashankar, "Principles of Economics' Mangala Publications, Mangalore 1997.

೩೦. ಡಾ. ಪ್ರಭಾಕರ ಶಿಶಿಲ; 'ಸೂಕ್ಷ್ಮ ಅರ್ಥಶಾಸ್ತ್ರ' ಮಂಗಳ ಪ್ರಕಾಶನ, ಮಂಗಳೂರು –೨೦೦೭.

೩೧. ಡಾ. ಪ್ರಭಾಕರ ಶಿಶಿಲ; 'ಸಮಗ್ರ ಅರ್ಥಶಾಸ್ತ್ರ' ಮಂಗಳ ಪ್ರಕಾಶನ, ಮಂಗಳೂರು ೨೦೦೭.

೩೨. ಎಚ್ಚಾರ್ಕೆ; 'ಆರ್ಥಿಕ ಸಿದ್ಧಾಂತ' ಸಪ್ನ ಬುಕ್ ಹೌಸ್, ಬೆಂಗಳೂರು, ೧೯೯೯.

೩೩. ನರಸಿಂಹ ಮೂರ್ತಿ; 'ಆರ್ಥಿಕ ಬೆಳವಣಿಗೆಯ ಸಿದ್ಧಾಂತಗಳು', ಪದ್ಮ ಪ್ರಕಾಶನ ಬೆಂಗಳೂರು, ೧೯೮೨.

೩೪. ಕೆ. ಅನಂತರಾಮರಾವ್; 'ಸ್ವಾತಂತ್ರ್ಯ ಸ್ವರ್ಣಮಹೋತ್ಸವ', ವಿದ್ಯಾ ಪಬ್ಲಿಷಿಂಗ್ ಹೌಸ್, ೧೯೯೭.

೩೫. ಡಾ. ಕೆ. ಸದಾಶಿವ; 'ಭಾರತದ ಸ್ವಾತಂತ್ರ್ಯ ಹೋರಾಟ', ಪ್ರಿಯದರ್ಶಿನಿ ಪ್ರಕಾಶನ, ಮೈಸೂರು ೧೯೯೬.

೩೬. ಪ್ರೊ. ಗಿಲ್ಬರ್ಟ್ ಸಿಕ್ವೇರಾ, ಸ್ಟೀವನ್ ಕ್ವಾಡರ್ಸ್; 'ಭಾರತದ ಇತಿಹಾಸ' ಮಂಗಳ ಪ್ರಕಾಶನ, ೨೦೦೦.

೩೭. ವೀರ ಸಾವರ್ಕರ್, ಕನ್ನಡ ಸಂಗ್ರಹಾನುವಾದ: ಬಾಬುಕೃಷ್ಣ ಮೂರ್ತಿ; '೧೮೫೭ ಭಾರತದ ಸ್ವಾತಂತ್ರ್ಯ ಸಂಗ್ರಾಮ', ಪ್ರಕಾಶಕರು ಶ್ರೀ ಸಮುದ್ರತಾ ಸಾಹಿತ್ಯ, ಬೆಂಗಳೂರು ೨೦೦೭.

೩೮. ಎ. ಪಿ. ಶ್ರೀನಿವಾಸ ಮೂರ್ತಿ; 'ಭಾರತದ ಸ್ವಾತಂತ್ರ್ಯ ಚಳುವಳಿ' ೧೮೫೭-೧೯೪೭ ಕರ್ನಾಟಕ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೯೪.

೩೯. ಪ್ರೊ. ಎಚ್. ಎಂ. ರಾಜಶೇಖರ; 'ಭಾರತ ಸರ್ಕಾರ ಮತ್ತು ರಾಜಕೀಯ', ಕಿರಣ್ ಪ್ರಕಾಶನ, ಮೈಸೂರು ೧೯೮೦.

೪೦. H. S. Agarwal; 'Principles of Economics' Shiva Lal Agarwala & Company. Agra, 1978.

೪೧. ಎಸ್. ಆರ್. ರಾಮಸ್ವಾಮಿ; 'ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು', ರಾಷ್ಟ್ರೋತ್ಥಾನ ಸಾಹಿತ್ಯ, ಕೆಂಪೇಗೌಡನಗರ, ಬೆಂಗಳೂರು ೧೯೯೭.

೪೨. ಎಂ. ರಾಘವೇಂದ್ರ ಪ್ರಭು; 'ಭಾರತದ ಇತಿಹಾಸ ೧೮೫೭-೧೯೬೪', ಸ್ಟೂಡೆಂಟ್ ಬುಕ್ ಸೆಂಟರ್ ಪ್ರಕಾಶಕರು, ಮಂಗಳೂರು, ೨೦೦೩.

೪೩ ಬಿ. ಆರ್. ಪ್ರಾಣೇಶ್ ರಾವ್, 'ಭಾರತದ ಸ್ವಾತಂತ್ರ್ಯ ಹೋರಾಟದ ಮೇರು ವ್ಯಕ್ತಿಗಳು' ನವಭಾರತೀ ಪ್ರಕಾಶನ, ಸರಸ್ವತಿಪುರಂ, ಮೈಸೂರು, ೧೯೯೯.

೪೪. ಎಂ. ರಾಘವೇಂದ್ರ ಪ್ರಭು; 'ಭಾರತದ ಸ್ವಾತಂತ್ರ್ಯ ಚಳವಳಿ' ಸ್ಟುಡೆಂಟ್ ಬುಕ್ ಸೆಂಟರ್, ಮಂಗಳೂರು, ೨೦೦೮.

೪೫. ಎಂ. ರಾಘವೇಂದ್ರ ಪ್ರಭು; 'ಆಧುನಿಕ ಕರ್ನಾಟಕ ೧೫೬೫-೧೯೫೬' ಸ್ಟೂಡೆಂ ಟ್ ಬುಕ್ ಸೆಂಟರ್, ಮಂಗಳೂರು, ೨೦೦೮.

